# ಗೋದಾನಾದಿವಿಧಾನಮ್

## (ಸಂಕಲ್ಪಕಲ್ಪಸಹಿತಮ್)









ಸಂ. : ವೇ। ಬ್ರ ಮಿತ್ತೂರು ಶ್ರೀನಿವಾಸ ಭಟ್ಟ, ಎಂ. ಎ.



ಸ್ಥಾಪನೆ : ೧೯೯೩

ಬ್ರಹ್ಮಶ್ರೀ ಮಿತ್ತೂರು ಪುರೋಹಿತ ತಿಮ್ಮಯ್ಯ ಭಟ್ಟ ಸಂಪ್ರತಿಷ್ಠಾನ (ರಿ.)

ಅನೂಚಾನನಿಲಯ, ಅಂಚೆ : ಇಡ್ಕಿದು - ೫೭೪ ೨೨೦, ಬಂಟ್ವಾಳ ತಾಲೂಕು, ದ. ಕ.

ಸಂಪ್ರತಿಷ್ಠಾನದ ೩೦ನೇ ಕೃತಿಕುಸುಮ

# ಗೋದಾನಾದಿವಿಧಾನಮ್

(ಸಂಕಲ್ಪಕಲ್ಪಸಹಿತಮ್)


ಸಂಪಾದಕ

ವೇ। ಬ್ರ ಮಿತ್ತೂರು ಪುರೋಹಿತ ಶ್ರೀನಿವಾಸ ಭಟ್ಟ, ಎಂ. ಎ.

ಜ್ಯೋತಿಷ ಶಿರೋಮಣಿ





ಬ್ರಹ್ಮಶ್ರೀ ಮಿತ್ತೂರು ಪುರೋಹಿತ ತಿಮ್ಮಯ್ಯ ಭಟ್ಟ ಸಂಪ್ರತಿಷ್ಠಾನ (ರಿ.)

ಅನೂಚಾನ ನಿಲಯ

ಅಂಚೆ : ಇಡ್ಕಿದು – ೫೭೪ ೨೨೦, ಬಂಟ್ವಾಳ ತಾಲೂಕು, ದ. ಕ.

ಸ್ಥಾಪನೆ : ೧೯೯೩

# ಗೋದಾನಾದಿವಿಧಾನಮ್

ಸಂಪಾದಕ : **ವೇ। ಬ್ರ ಮಿತ್ತೂರು ಪುರೋಹಿತ ಶ್ರೀನಿವಾಸ ಭಟ್ಟ**, ಎಂ.ಎ.
ಜ್ಯೋತಿಷ ಶಿರೋಮಣಿ, ಶ್ರೀಶರಾಮನಿವಾಸ, ಅಂಚೆ : ಅನಂತಾಡಿ,
ಬಂಟ್ವಾಳ ತಾಲೂಕು, ದ. ಕ., ಚರದೂರವಾಣಿ : 9449936842

ಪ್ರಕಾಶಕರು : ಬ್ರಹ್ಮಶ್ರೀ ಮಿತ್ತೂರು ಪುರೋಹಿತ ತಿಮ್ಮಯ್ಯ ಭಟ್ಟ ಸಂಪ್ರತಿಷ್ಠಾನ (ರಿ.)
ಅನೂಚಾನ ನಿಲಯ, ಅಂಚೆ : ಇಡ್ಕಿದು – 574 220
ಬಂಟ್ವಾಳ ತಾಲೂಕು, ದ. ಕ., ದೂರವಾಣಿ : 08251 - 281101

ಪುಟಗಳು : 26 + ೮೪ (=೧೧೦)

© ಕಾಯ್ದಿರಿಸಲಾಗಿದೆ.

**ಬೆಲೆ : ₹ ೧೦೦-೦೦** **Price : ₹ 100-00**

ಪ್ರಥಮ ಮುದ್ರಣ : ಶಾ. ಶ. ೧೯೩೯. ಹೇಮಲಂಬಿಸಂವತ್ಸರ. ಕ್ರಿ. ಶ. 2017, ಸೆಪ್ಟಂಬರ್

ಪ್ರತಿಗಳು : 1200

## GODĀNĀDIVIDHĀNAM

Edited by : **Ved. Mittur Purohita Shrinivasa Bhatta,** M.A.

Published by : **Brahmashree Mitturu Purohita Thimmayya Bhatta Samprathishthana (R.)**
Anoochana Nilaya, P. O. Idkidu - 574 220, Bantwal, D. K.
+91 9483355101; Email : samprathishtaana@gmail.com

**ಗ್ರಂಥಸಂಪಾದನ ಮಾರ್ಗದರ್ಶಕಸಮಿತಿ :**

೧. **ಶ್ರೀ ಪಾದೆಕಲ್ಲು ನರಸಿಂಹ ಭಟ್ಟ**, ಕರೋಪಾಡಿ
೨. **ಡಾ। ಪಾದೇಕಲ್ಲು ವಿಷ್ಣು ಭಟ್ಟ**, ಉಡುಪಿ
೩. **ವೇ। ಬ್ರ ಮಿತ್ತೂರು ಶ್ರೀನಿವಾಸ ಭಟ್ಟ**, ಅನಂತಾಡಿ
೪. **ವೇ। ಬ್ರ ಬೋಳಂತಕೋಡಿ ರಾಮ ಭಟ್ಟ**, ಕೋಳ್ಯೂರು
೫. **ವೇ। ಬ್ರ ಅಮ್ಮೈ ಅನಂತಕೃಷ್ಣ ಭಟ್ಟ**, ಬೆಂಗಳೂರು
೬. **ವೇ। ಬ್ರ ಮಂಜಾಳಗಿರಿ ವೆಂಕಟರಮಣ ಭಟ್ಟ**, ಬೆಟ್ಟಂಪಾಡಿ

ಅಕ್ಷರಸಂಯೋಜನೆ ಮತ್ತು ರಕ್ಷಾಪುಟವಿನ್ಯಾಸ :
ಶ್ರೀಮತಿ ಜಯಲಕ್ಷ್ಮೀ ಎಸ್. ಜೋಯಿಸ್, ಪುತ್ತೂರು

ಮುದ್ರಣ : ನಾಗರತ್ನ ಪ್ರಿಂಟರ್ಸ್, ಬೆಂಗಳೂರು

# ಕಿರುಪರಿಚಯ



**ಶ್ರೀಮತಿ ಪರಮೇಶ್ವರಿ (ಪಾರ್ವತಿ) ಅಮ್ಮ ಮತ್ತು ಬಿ. ಕೆ. ನಾರಾಯಣ ಭಟ್ಟ**

**ಬಿ. ಕೆ. ನಾರಾಯಣ ಭಟ್ಟ ಜನನ : ೨೩-೭-೧೯೩೫ ಮರಣ : ೨೩-೫-೨೦೧೬**



ಪುತ್ತೂರು ಬಲ್ನಾಡು ಕಬ್ಬಿನಹಿತ್ತಿಲು ನಾರಾಯಣ ಭಟ್ಟರು ಹವ್ಯಕ ಪರಂಪರೆಯ ಸುಪ್ರಸಿದ್ಧ ಆಲಂಗಾರು ಮನೆತನದ ಕಬ್ಬಿನಹಿತ್ತಿಲು ಪದ್ಮನಾಭ ಭಟ್ಟ ಹಾಗೂ ಅದಿತಿ ಅಮ್ಮನವರ ಸುಪುತ್ರರು. ಇವರು ೨೩-೭-೧೯೩೫ ರಂದು ಜನಿಸಿದರು. ಇವರು ಬಾಲ್ಯಜೀವನದಲ್ಲಿ ಹಲವು ಕಷ್ಟಗಳನ್ನು ಅನುಭವಿಸಿ ಸುಖ-ದುಃಖಗಳನ್ನು ಸಮನಾಗಿ ತೆಗೆದುಕೊಂಡವರು. ವಿದ್ಯಾಭ್ಯಾಸವು ಕೇವಲ ಪ್ರಾಥಮಿಕಮಾತ್ರವಾದರೂ ಲೋಕಜ್ಞಾನ ಅಧಿಕ ವಾಗಿತ್ತು. ತಮ್ಮ ಆರನೇ ವಯಸ್ಸಿನಲ್ಲಿಯೇ ಪಿತೃಚರಣರನ್ನು ಕಳಕೊಂಡು ತಾಯಿಯೊಂದಿಗೆ ಅಜ್ಜನ ಮನೆ(ಸರಳಿ)ಯಲ್ಲಿ ಪ್ರಾಯಪ್ರಬುದ್ಧರಾಗುವ ತನಕವಿದ್ದು ತದನಂತರ ಮಾತೃಶ್ರೀಯವರೊಂದಿಗೆ ಬಲ್ನಾಡು ಕಬ್ಬಿನಹಿತ್ತಿಲಿಗೆ ಬಂದು ತಮ್ಮ ಪೂರ್ವಜರ ಕೃಷಿಕಾರ್ಯಗಳನ್ನು ಮುಂದುವರಿಸಿದವರು.

ತಮಗೆ ವಿದ್ಯಾಭ್ಯಾಸ ಮಾಡಲು ಅನನುಕೂಲವಾದುದರಿಂದ ತಮ್ಮ ಕಷ್ಟಗಳನ್ನು ಗ್ರಹಿಸದೇ ಇತರರ ಕಷ್ಟಗಳಿಗೆ ಸದಾ ಸ್ಪಂದಿಸುತ್ತಿದ್ದರು. ಪರಿಸರದ ಅನೇಕ ಬಡಜನರ ವಿದ್ಯಾಭ್ಯಾಸಕ್ಕೆ ಸಹಕಾರ ಮಾಡಿದವರು. ಇಂದಿಗೂ ಅವರಿಂದ ಸಹಾಯಹಸ್ತ ಪಡೆದ ಆ ಪರಿಸರದ ಅನೇಕ ಮಂದಿ ಅವರನ್ನು ಸ್ಮರಿಸುತ್ತಾರೆ. ಬಲ್ನಾಡು ಗ್ರಾಮದಲ್ಲಿ ಅವರ ಪರಿಚಯವಿಲ್ಲದವರು ಅಪರೂಪ.

ಪ್ರಾಯಪ್ರಬುದ್ಧರಾದಾಗ (ವಿಟ್ಲ) ನೂಜಿ ಗೋವಿಂದ ಭಟ್ಟ ಮತ್ತು ಕಾವೇರಿ ಅಮ್ಮನವರ ಸುಪುತ್ರಿ ಪರಮೇಶ್ವರಿ (ಪಾರ್ವತಿ) ಅಮ್ಮನವರನ್ನು ವಿವಾಹವಾಗಿ ಗೃಹಸ್ಥಾಶ್ರಮ ಸ್ವೀಕರಿಸಿದರು.

ದಿ| ಬಿ. ಕೆ. ನಾರಾಯಣ ಭಟ್ಟರು ಉತ್ತಮ ಸಾಹಸೀ ಕೃಷಿಕರಾಗಿ ತಮ್ಮ ಔದಾರ್ಯದಿಂದ ಸಮಾಜದಲ್ಲಿ ಉತ್ತಮ ಹೆಸರು ಪಡೆದವರು. ಇವರು ಧಾರ್ಮಿಕ ಕರ್ಮಗಳಲ್ಲಿ ಶ್ರದ್ಧಾಭಕ್ತಿಯುಳ್ಳವರು ಹಾಗೂ ಪುರೋಹಿತರ ಮಾರ್ಗದರ್ಶನದಲ್ಲಿಯೇ ಪೂಜೆ-ಹವನಾದಿಗಳನ್ನು ವಿಧಿವತ್ತಾಗಿ ಆಚರಿಸುತ್ತಿದ್ದರು. ಅದಲ್ಲದೇ ಕರ್ಮಾನುಷ್ಠಾನಾಂಗ ದಕ್ಷಿಣಾ-ದಾನಾದಿಗಳನ್ನು ಭೂಯಿಷ್ಠವಾಗಿ ಮಾಡಿ ಕರ್ಮಪುಷ್ಟಿಯಿಂದ ವೈದಿಕೋತ್ತಮರ ವಿಶೇಷ ಆಶೀರ್ವಾದಾದಿಗಳನ್ನೂ ಗಳಿಸಿಕೊಂಡವರು.

ಬಾಲ್ಯದಲ್ಲಿ ಇವರಿಂದ ಸಹಾಯಹಸ್ತ ಪಡೆದ ಅನೇಕ ವಿದ್ಯಾರ್ಥಿಗಳು, ಬಾಂಧವರೂ ಈಗ ಬೇರೆ ಬೇರೆ ಕಡೆಗಳಲ್ಲಿದ್ದರೂ ಇವರನ್ನು ಸದಾ ಸ್ಮರಿಸುತ್ತಿರುವರು.

ಇವರು ಹಿಂದೆ ನಮ್ಮ ಸಂಪ್ರತಿಷ್ಠಾನದಿಂದ ಪ್ರಕಾಶನಗೊಂಡ 'ಶಾರದಾರಾಧನಮ್' ಎಂಬ ಗ್ರಂಥಕ್ಕೆ ಉದಾರ ದಾನವನ್ನೂ ನೀಡಿದವರು ಹಾಗೂ ಸಂಪ್ರತಿಷ್ಠಾನದ ಏಳಿಗೆಯ ವಿಷಯದಲ್ಲಿ ತುಂಬಾ ಸಹಕಾರಿ ಯಾಗಿದ್ದವರು.

ಇವರ ಸ್ಮರಣಾರ್ಥ ಧರ್ಮಪತ್ನಿ ಶ್ರೀಮತೀ ಪರಮೇಶ್ವರೀ (ಪಾರ್ವತಿ) ಅಮ್ಮನವರು 'ಗೋದಾನಾದಿವಿಧಾನಮ್' ಕೃತಿಯ ಮುದ್ರಣಕ್ಕೆ ಸಂಪೂರ್ಣ ಆರ್ಥಿಕ ಸಹಾಯವನ್ನು ನೀಡಿದ್ದು ಸಂಸ್ಥೆಯು ಅವರಿಗೆ ಕೃತಜ್ಞತೆ ಸಮರ್ಪಿಸುತ್ತದೆ. ದಿ| ಬಿ. ಕೆ. ನಾರಾಯಣ ಭಟ್ಟರಿಗೆ ಗೋಮಾತೆಯು ಸದ್ಗತಿಯನ್ನೂ, ಅವರ ಕುಟುಂಬದವರಿಗೆ ಉತ್ತರೋತ್ತರ ಮಂಗಲವನ್ನೀಯಲಿ ಎಂದು ಭಗವಂತನಲ್ಲಿ ಸಂಪ್ರಾರ್ಥಿಸುತ್ತದೆ.

– **ಸಂಪ್ರತಿಷ್ಠಾನ**

# ಪ್ರಕಾಶಕೀಯ

'ಗೋದಾನಾದಿವಿಧಾನಮ್' ಎಂಬ ಈ ಕೃತಿಯು ನಮ್ಮ ಸಂಪ್ರತಿಷ್ಠಾನದ ಮೂವತ್ತನೆಯ ಪ್ರಕಟನೆ. ವೈದಿಕಕ್ಷೇತ್ರದಲ್ಲಿ ಕಾರ್ಯನಿರ್ವಹಿಸುವವರಿಗೆ ದಾನಪ್ರಕ್ರಿಯೆಯು ಅತ್ಯಂತ ಮುಖ್ಯವಾದುದೆಂದು ತಿಳಿದೇ ಇದೆ. ಯಾವುದೇ ವೈದಿಕಪ್ರಕ್ರಿಯೆಯಲ್ಲಿ ಆ ಕಾರ್ಯದ ಪ್ರಾರಂಭದಲ್ಲಿ ಮಾಡುವ ಸಂಕಲ್ಪಕ್ಕೆ ಮುಖ್ಯಸ್ಥಾನವಿದ್ದು ದಾನಾದಿಗಳ ಸಂದರ್ಭದಲ್ಲೂ ದಾನಮಾಡುವ ಉದ್ದೇಶವನ್ನು ಸ್ಪಷ್ಟಪಡಿಸಿಕೊಳ್ಳುವುದು ಮುಖ್ಯ. ಆ ಸ್ಪಷ್ಟತೆ ಉಂಟಾಗುವುದು ಸಂಕಲ್ಪಸಂದರ್ಭದಲ್ಲೇ ಸರಿ. ಆದುದರಿಂದ ಸಂಕಲ್ಪವು ಸ್ಪಷ್ಟವಾಗಿಯೂ ಶುದ್ಧವಾಗಿಯೂ ಇರುವುದು ಮುಖ್ಯ. ಈ ಕಾರಣದಿಂದ ಸಂಕಲ್ಪ ಮಂತ್ರಗಳನ್ನುಳ್ಳ ಒಂದು ಪುಸ್ತಕವನ್ನು ಹೊರತಂದಲ್ಲಿ ವೈದಿಕವಿದ್ವಾಂಸರ ಕ್ಷೇತ್ರಕ್ಕೆ ಅನುಕೂಲವಾಗಬಹುದೆಂದು ಚಿಂತಿಸಿ ಈ ಪುಸ್ತಕದ ಸಿದ್ಧತೆಗೆ ಉಪಕ್ರಮಿಸಲಾಯಿತು.

ಗೋದಾನ-ಭೂದಾನವೇ ಮೊದಲಾದುವು ಮಹಾದಾನಗಳಲ್ಲಿ ಸೇರುತ್ತವೆ. ಆ ಮಹಾದಾನಗಳ ಸಂಕಲ್ಪವೂ ಒಂದೊಂದೆಡೆಯಲ್ಲಿ ಒಂದೊಂದು ರೀತಿಯಲ್ಲಿರುವುದು ಕಂಡುಬರುತ್ತದೆ. ನಮ್ಮ ಪರಿಸರದಲ್ಲಿ ಬಳಕೆಯಲ್ಲಿದ್ದ ಸಂಕಲ್ಪವಿಧಿಗಳನ್ನು ಪರಿಶೀಲಿಸಿ ನಮ್ಮ ಪರಿಸರದ ವೈದಿಕವಿದ್ವಾಂಸರಾಗಿದ್ದ ದಿವಂಗತ ಮಿತ್ತೂರು ಪುರೋಹಿತ ಶಂಕರನಾರಾಯಣ ಭಟ್ಟರು ಒಂದು ವಿಶಿಷ್ಟ ವಿಧಾನವನ್ನು ರೂಪಿಸಿದ್ದಲ್ಲದೆ ಅವರ ಶಿಷ್ಯವರ್ಗದವರಿಗೆಲ್ಲ ಅದನ್ನೇ ಪಾಠ ಮಾಡಿದರು. ಈ ಸಂಕಲ್ಪವಿಧಾನವು ಬಹಳ ಉತ್ತಮವಾಗಿದೆಯೆಂದು ಹಲವರು ವೈದಿಕವಿದ್ವಾಂಸರು ಹೇಳುತ್ತಿದ್ದರೂ ಅವೆಲ್ಲ ಮುದ್ರಿತರೂಪದಲ್ಲಿ ಉಪಲಬ್ಧವಿರಲಿಲ್ಲ. ಅವೆಲ್ಲವನ್ನು ಮುದ್ರಿಸುವುದಲ್ಲದೆ ಅವಶ್ಯವಾದ ಇತರ ಕೆಲವು ವೈದಿಕವಿಧಿಗಳನ್ನೂ ಸೇರಿಸಿ ಅವೆಲ್ಲವುಗಳ ವಿವರಗಳ ಬಗೆಗೆ ಟಿಪ್ಪಣಿಗಳನ್ನೂ ವಿಸ್ತೃತವಾದ ಪ್ರಸ್ತಾವನೆಯನ್ನೂ ಬರೆದು ಮುದ್ರಣಕ್ಕೆ ಸಿದ್ಧಪಡಿಸುವಂತೆ ಸಂಪ್ರತಿಷ್ಠಾನದ ಕಾರ್ಯಕರ್ತರಲ್ಲೊಬ್ಬರೂ ಈಗಾಗಲೇ ನಮ್ಮ ಸಂಸ್ಥೆಯ ಹಲವು ಕೃತಿಗಳ ಸಂಪಾದಕರೂ ವೈದಿಕ-ಜ್ಯೋತಿಷ ವಿದ್ವಾಂಸರೂ ಆದ ವೇ। ಮಿತ್ತೂರು ಶ್ರೀನಿವಾಸ ಭಟ್ಟರಲ್ಲಿ ಕೇಳಿಕೊಂಡಾಗ

ಅವರು ಈ ಕೆಲಸವನ್ನು ಸಂತೋಷದಿಂದ ನಿರ್ವಹಿಸಿದ್ದಲ್ಲದೆ ಹಲವು ಆಧಾರಗ್ರಂಥಗಳನ್ನು ಪರಿಶೀಲಿಸಿ ಅವಶ್ಯವಿಚಾರಗಳನ್ನು ಸಂಗ್ರಹಿಸಿ ಪ್ರಸ್ತಾವನೆಯಲ್ಲಿ ವಿವರಗಳನ್ನು ನೀಡಿ ಈ ವಿಷಯದಲ್ಲಿ ತಿಳಿಯುವ ಕುತೂಹಲವುಳ್ಳವರಿಗೆಲ್ಲ ಸಮಗ್ರವಾದ ಮಾಹಿತಿ ದೊರಕುವಂತೆ ವ್ಯವಸ್ಥೆಗೊಳಿಸಿದ್ದಾರೆ. ಅವರಿಗೆ ಸಂಪ್ರತಿಷ್ಠಾನವು ಇತೋಪ್ಯತಿಶಯವಾದ ಅಭಿವೃದ್ಧಿಯನ್ನು ಬಯಸಿ ಶುಭವನ್ನು ಹಾರಯಿಸುತ್ತದೆ. ಮುಂದಿನ ಪುಸ್ತಕ ಪ್ರಕಾಶನಸಂದರ್ಭಗಳಲ್ಲಿ ಕೂಡ ಇವರ ಸಂಪೂರ್ಣ ಸಹಕಾರ ನಮಗೆ ದೊರೆಯುವ ಭರವಸೆಯಿದೆ.

ಈ ಪುಸ್ತಕಪ್ರಕಾಶನದ ಸಂದರ್ಭದಲ್ಲಿ ಮಾರ್ಗದರ್ಶನ–ಸಹಕಾರಗಳನ್ನು ನೀಡಿದ ನಮ್ಮ ಸಂಸ್ಥೆಯ ಗ್ರಂಥಪ್ರಕಾಶನ ಮಾರ್ಗದರ್ಶಕ ಸಮಿತಿಯ ಡಾ. ಪಾದೇಕಲ್ಲು ವಿಷ್ಣು ಭಟ್ಟರು ಈ ಕೃತಿಪ್ರಕಾಶನದಲ್ಲಿ ಸಕ್ರಿಯವಾಗಿ ಪಾಲುಗೊಂಡಿದ್ದಾರೆ. ಅವರು ಮತ್ತು ವಿದ್ವಾನ್ ಮಂಜುಳಗಿರಿ ವೆಂಕಟರಮಣ ಭಟ್ಟರು ಈ ಕೃತಿಯ ಕರಡಚ್ಚುಗಳನ್ನು ನೋಡಿದ್ದಾರೆ. ಇವರಿಬ್ಬರಿಗೂ ವಂದನೆಗಳು ಸಲ್ಲುತ್ತವೆ.

ವೇ। ಮಿತ್ತೂರು ಪುರೋಹಿತ ಶಂಕರನಾರಾಯಣ ಭಟ್ಟರು ಬರೆದಿರಿಸಿದ ಹಸ್ತಪ್ರತಿಗಳನ್ನು ಕಾಪಿಟ್ಟು ಒದಗಿಸಿಕೊಟ್ಟ ವೇ। ಮಿತ್ತೂರು ಸದಾಶಿವ ಭಟ್ಟರೂ ಅಭಿನಂದನೆಗೆ ಅರ್ಹರು.

ಸಂಪ್ರತಿಷ್ಠಾನದ ಚಟುವಟಿಕೆಗಳನ್ನು ಸದಾ ಪ್ರೋತ್ಸಾಹಿಸುತ್ತಿದ್ದ ದಿ। ಕಬ್ಬಿನಹಿತ್ತಿಲು ಬಿ. ಕೆ. ನಾರಾಯಣ ಭಟ್ಟರು ನಮ್ಮ ಸಂಪ್ರತಿಷ್ಠಾನದ ಹಿಂದಿನ ಪ್ರಕಟನೆಯಾದ 'ಶಾರದಾರಾಧನಮ್' ಕೃತಿಯ ಪ್ರಕಟನೆಗೆ ಪೂರ್ಣ ಸಹಕಾರ ನೀಡಿದವರು. ಇಂದು ಅವರ ನೆನಪಿನಲ್ಲಿ ಅವರ ಧರ್ಮಪತ್ನಿ ಶ್ರೀಮತಿ ಬಿ. ಕೆ. ಪರಮೇಶ್ವರೀ (ಪಾರ್ವತಿ) ಅಮ್ಮ ಅವರು ಈ ಕೃತಿಯ ಪ್ರಕಾಶನದ ಖರ್ಚು–ವೆಚ್ಚಗಳ ಹೊಣೆಗಾರಿಕೆಯನ್ನು ಸಂತೋಷಪೂರ್ವಕವಾಗಿ ವಹಿಸಿಕೊಂಡಿದ್ದು ಸಂಪ್ರತಿಷ್ಠಾನವು ಅವರಿಗೆ ಕೃತಜ್ಞತೆಯನ್ನು ಸಮರ್ಪಿಸುತ್ತದೆ.

ಅಕ್ಷರಸಂಯೋಜನೆ ಮಾಡಿದ ಶ್ರೀಮತಿ ಜಯಲಕ್ಷ್ಮೀ ಎಸ್. ಜೋಯಿಸ್, ಪುತ್ತೂರು ಅವರಿಗೂ, ಮುದ್ರಣ ಮಾಡಿದ ನಾಗರತ್ನ ಪ್ರಿಂಟರ್ಸ್, ಬೆಂಗಳೂರು ಅವರಿಗೂ ಹೃತ್ಪೂರ್ವಕ ವಂದನೆಗಳು.

ವ್ಯಾಸಪೂರ್ಣಿಮಾ
೯–೭–೨೦೧೭

**ಪ್ರಕಾಶಕರು**

॥ ಶ್ರೀಗಣಾಧಿಪತಯೇ ನಮಃ ॥

॥ ಶ್ರೀಸರಸ್ವತ್ಯೈ ನಮಃ ॥

# ಸಂಪಾದಕೀಯ

ಶ್ರೀಗುರುಹಿರಿಯರ ಮತ್ತು ತ್ರಯಸ್ತ್ರಿಂಶತ್ ಕೋಟಿ ದೇವತೆಗಳಿಗೂ ಆವಾಸಸ್ಥಾನವಾಗಿರುವ ಗೋಮಾತೆಯ ಅನುಗ್ರಹದಿಂದ ಈ ಸದ್ಗ್ರಂಥವನ್ನು ಗ್ರಥಿಸಲು ಸಾಧ್ಯವಾಯಿತು. ಈ ಗ್ರಂಥದೊಳಗಿನ ವೈದಿಕ ಪ್ರಯೋಗಗಳಿಗೆ ಮೂಲ ಹಾಗೂ ಪ್ರೇರಣೆ ಮಿತ್ತೂರು ಪುರೋಹಿತ ಶಂಕರನಾರಾಯಣ ಭಟ್ಟರು ಬರೆದ ಹಸ್ತಪ್ರತಿಗಳಾಗಿವೆ. ಅವರು ದೀಪದಾನ, ಗೋದಾನ, ಭೂಮಿದಾನ, ದೈವಜ್ಞಪೂಜನಕ್ರಮ, ರಾಜತನೌಕಾದಾನ, ವಿಷ್ಣೋಃ ದ್ವಾದಶನಾಮಾರ್ಚನವಿಧಿಃ, ವೃಷಭದಾನ, ಛಾಗದಾನ, ದಂಪತೀವಾಯನ ದಾನ ಮತ್ತು ಅತಿರುದ್ರಹೋಮಮಹಾಸಂಕಲ್ಪ –ಇವುಗಳನ್ನು ಹಿಂದೆಯೇ ಬರೆದಿದ್ದರು. ಅದಲ್ಲದೆ ಅನೇಕ ಪ್ರಯೋಗಗಳನ್ನು ಬರೆದು ಮಂಗಳೂರು ಹೋಬಳಿಯ ಅನೇಕ ವೈದಿಕರಿಗೆ ಸದುಪಯೋಗವಾಗುವಂತೆ ಅವರವರಿಗೇ ಕೊಟ್ಟಿದ್ದರು. ಅಂತಹ ಅನೇಕ ಪ್ರಯೋಗ–ಲೇಖನಗಳು ಲುಪ್ತವಾಗಿವೆ. ಕೆಲವು ಪ್ರಯೋಗಗಳಿಗೆ ಆಧಾರಗ್ರಂಥಗಳಿಂದ ಶ್ಲೋಕಗಳನ್ನು ಸೇರಿಸಿ ಬರೆಯಲಾಗಿದೆ. ಕೆಲವು ಸಂಕಲ್ಪಾದಿಗಳನ್ನು ಪ್ರಸ್ತುತ ಗ್ರಂಥರಚನಾ ಸಂದರ್ಭದಲ್ಲಿ ಬರೆದು ಸೇರಿಸಲಾಗಿದೆ. ಗೋದಾನಪ್ರಯೋಗಕ್ಕೆ ಮತ್ತು ಇತರ ಪ್ರಯೋಗಗಳಿಗೆ ಪೂರಕವಾಗಿ ಗ್ರಂಥಾಂತರಗಳಿಂದ ವಿಷಯಗಳನ್ನು ಸಂಕಲಿಸಲಾಗಿದೆ. ನನ್ನ ಪಿತುಃಪಿತೃವ್ಯಚರಣರ ಅನುಗ್ರಹವನ್ನು ಸದಾ ಸಂಪ್ರಾರ್ಥಿಸುತ್ತೇನೆ.

ಈ ಗ್ರಂಥಸಂಪಾದನೆಗೆ ಮಾರ್ಗದರ್ಶನಮಾಡಿದ ಮತ್ತು ಕರಡಚ್ಚು ತಿದ್ದಿದ ಗ್ರಂಥಸಂಪಾದನ ಮಾರ್ಗದರ್ಶಕಸಮಿತಿಯ ಸದಸ್ಯರುಗಳಾದ ಡಾ। ಪಾದೇಕಲ್ಲು ವಿಷ್ಣು ಭಟ್ಟರಿಗೆ ಹಾಗೂ ಶ್ರೀ ಮಂಜುಳಗಿರಿ ವೆಂಕಟರಮಣ ಭಟ್ಟರಿಗೆ, ಅಕ್ಷರಸಂಯೋಜನೆ ಮಾಡಿದ ಶ್ರೀಮತೀ ಜಯಲಕ್ಷ್ಮೀ ಎಸ್. ಜೋಯಿಸ್ ಮತ್ತು ಸಂಪ್ರತಿಷ್ಠಾನದ ಎಲ್ಲಾ ಕಾರ್ಯಕರ್ತರಿಗೆ ವಂದನೆಗಳು.

ನನ್ನ ಅಗ್ರಜ ಮಿತ್ತೂರು ತಿರುಮಲೇಶ್ವರ ಭಟ್ಟರು ಹಾಗೂ ಸಲಹೆ–ಸೂಚನೆಗಳನ್ನಿತ್ತ ಎಲ್ಲಾ ವೈದಿಕ–ಲೌಕಿಕ ಮಹನೀಯರಿಗೂ ಕೃತಜ್ಞತೆಗಳು.

ದೇವಕಾರ್ಯವಿಧಾನವನ್ನು ಒದಗಿಸಿಕೊಟ್ಟ ಕಿಳಿಂಗಾರು ನಡುಮನೆ ವೇ। ಬ್ರ ಶ್ರೀ। ಗೋಪಾಲಕೃಷ್ಣ ಭಟ್ಟರಿಗೂ ಕೃತಜ್ಞತೆಗಳು.

ಈ ಪುಸ್ತಕ ಪ್ರಕಾಶನದಲ್ಲಿ ಆರ್ಥಿಕ ಸಹಾಯವನ್ನಿತ್ತ ದಿವಂಗತ ಕಜ್ಜಿನಹಿತ್ತಿಲು ಬಲ್ನಾಡು ನಾರಾಯಣ ಭಟ್ಟರ ಪತ್ನೀ ಶ್ರೀಮತೀ ಪರಮೇಶ್ವರೀ (ಪಾರ್ವತಿ) ಅಮ್ಮನವರಿಗೂ ನನ್ನ ಕೃತಜ್ಞತೆಗಳು ಹಾಗೂ ಮಾತಾ–ಪಿತೃಸಮಾನರಾದ ಅವರಿಂದ ಆಶೀರ್ವಾದವನ್ನೂ ಸಂಪ್ರಾರ್ಥಿಸುತ್ತೇನೆ.

ನಮ್ಮ ಸಂಪ್ರತಿಷ್ಠಾನದಿಂದ ಪ್ರಕಟಿಸಲಾದ ಪೂರ್ವಗ್ರಂಥಗಳನ್ನು ಯಾವ ರೀತಿ ಸಮಾಜ ಸ್ವೀಕರಿಸಿದೆಯೋ ಅದರಂತೆ ಈ ಗ್ರಂಥವನ್ನೂ ಪ್ರೋತ್ಸಾಹಿಸಿ ಗ್ರಂಥವನ್ನು ಪ್ರಚುರಪಡಿಸಿ ಸಹಕರಿಸಬೇಕೆಂದು ಕೋರಿಕೆ. ಸಂಪ್ರತಿಷ್ಠಾನದ ಧ್ಯೇಯೋದ್ದೇಶಗಳಿಗೆ ನಮ್ಮ ಸಮಾಜದ ಸಹಕಾರ ದೊರೆಯಲಿ ಎಂದು ಕಳಕಳಿಯ ಪ್ರಾರ್ಥನೆ.

ಇನ್ನು ಮುಂದೆಯೂ ಗ್ರಂಥಾಂತರಗಳನ್ನು ಸಂಪಾದಿಸಿ ಪ್ರಕಾಶನಗೊಳಿಸಲು ಸಂಪ್ರತಿಷ್ಠಾನವು ಸಂಕಲ್ಪಿಸಿದೆ. ಸಹೃದಯಿಗಳಾದ ವಿದ್ವಜ್ಜನರು ಹಾಗೂ ತಾವೆಲ್ಲರೂ ಪ್ರೋತ್ಸಾಹಿಸಬೇಕೆಂದು ಈ ಮೂಲಕ ಪುನಃ ಪುನಃ ಸಂಪ್ರಾರ್ಥಿಸುತ್ತೇನೆ.

**ಗೋದಾನಾದಿವಿಧಾನಂ ಚ ರಚಿತಂ ಪೂರ್ವಸೂರಿಭಿಃ ।**
**ಗ್ರಂಥಾಂತರಾಚ್ಚ ಸಂಗೃಹ್ಯ ಶ್ರೀನಿವಾಸೇನ ಯತ್ನತಃ ॥**

ಇತಿ

**ವೇ। ಬ್ರ ಮಿತ್ತೂರು ಪುರೋಹಿತ ಶ್ರೀನಿವಾಸ ಭಟ್ಟ**, ಎಂ.ಎ.
ಜ್ಯೋತಿಷ ಶಿರೋಮಣಿ
ಶ್ರೀಶರಾಮನಿವಾಸ, ಅಂಚೆ : ಅನಂತಾಡಿ
ಬಂಟ್ವಾಳ ತಾಲೂಕು, ದ. ಕ., ೫೭೪ ೨೫೩
ದೂರವಾಣಿ : ೦೯೪೪೯೯೬೭೦೪೩

ಹೇಮಲಂಬಿ ನಾಮ ಸಂ।
ಆಷಾಢ ಕೃ। ದ್ವಾದಶಿ
ರೋಹಿಣೀ ನಕ್ಷತ್ರ
೨೦–೭–೨೦೧೭

# ಪ್ರಸ್ತಾವನೆ

ಮಿತ್ತೂರು ಪುರೋಹಿತ ಶಂಕರನಾರಾಯಣ ಭಟ್ಟರು (ನನ್ನ ಪಿತೃಚರಣರ ಪಿತೃವ್ಯರು) ಗೋಪೂಜೆ, ಗೋದಾನ, ವೃಷಭದಾನ, ದೀಪದಾನ, ಭೂಮಿದಾನ, ರಾಜತನೌಕಾದಾನ, ದೈವಜ್ಞಪೂಜನಕ್ರಮ, ವಿಷ್ಣೋಃ ದ್ವಾದಶನಾಮಾರ್ಚನ, ಛಾಗದಾನ, ಹೀಗೆ ಅನೇಕ ಪ್ರಯೋಗಗಳನ್ನು ಅನೇಕ ವೈದಿಕವರೇಣ್ಯರಿಗೆ ಸದುಪಯೋಗವಾಗಲೆಂದು ಬರೆದು ಕೊಟ್ಟಿದ್ದರು. ಈ ಗ್ರಂಥದಲ್ಲಿ ಕೆಲವೆಡೆ ಟಿಪ್ಪಣಿಗಳನ್ನು ಹಾಕಿರುತ್ತದೆ. ಪ್ರಸ್ತುತ ಕೃತಿಯಲ್ಲಿ ನಿರೂಪಿತವಾಗಿರುವ ಅರ್ಚನಾದಿಗಳಲ್ಲಿ ಉಕ್ತವಿಧಿಗಳನ್ನು ಕೆಲವೆಡೆ ಪುನರಾವರ್ತನೆ ಮಾಡಿರುವುದಿಲ್ಲ. ವಿಶೇಷ ಸಂದರ್ಭಗಳಲ್ಲಿ ಸೇರಿಸಲಾಗಿದೆ. ಹೀಗೆ ಇದು ಹಿಂದಿನವರ ಹಸ್ತಪ್ರತಿಗಳ ಪರಿಷ್ಕೃತರೂಪವೆಂದು ನಿವೇದಿಸಬಯಸುತ್ತೇನೆ.

ಪ್ರಯೋಗಗಳೊಡನೆ ದಾನಗಳ ಮಹತ್ತ್ವ, ಇತರೇತರ ವೈದಿಕ ಕರ್ಮಾನುಷ್ಠಾನಗಳ ಸಂದರ್ಭ, ದೇಶ–ಕಾಲ, ಹ್ರಸ್ವ–ದೀರ್ಘ, ಏಕದಿನಸಾಧ್ಯ–ಅನೇಕದಿನಸಾಧ್ಯ, ಏಕಕರ್ತೃಕ–ಅನೇಕಜನಸಹಕಾರಹಸ್ತಕರ್ತೃಕ, ಗೃಹಸಂಬಂಧೀ–ಗ್ರಾಮ–ದೇಶ–ದೇವಾಲಯ ಸಂಬಂಧೀ ಸಂಕಲ್ಪಗಳನ್ನು ಅವರು ಬರೆದಿದ್ದರು. ಅದಕ್ಕೆ ಹಲವನ್ನು ಸೇರಿಸಿ ಈ ಗ್ರಂಥದಲ್ಲಿ ಸಂಕಲಿಸಲಾಗಿದೆ. ವೈದಿಕರಿಗೆ ಸದುಪಯೋಗವಾಗುವ ದೃಷ್ಟಿಯಿಂದ ಹಾಗೂ ಸುಲಭಬೋಧಕವಾಗಿಯೂ ಸುಲಲಿತವಾಗಿಯೂ ಕರ್ಮಗಳನ್ನು ಮಾಡಿಸಲು ಸಾಧ್ಯವಾಗುವ ದೃಷ್ಟಿಯಿಂದ ಪ್ರಯೋಗಗಳಿಗೆ ಸಂಬಂಧಿಸಿದಂತೆ ಇಹಲೋಕಸಂಕಲ್ಪ, ಪರಲೋಕಸಂಬಂಧೀ ಸಂಕಲ್ಪಗಳನ್ನು ಸೇರಿಸಲಾಗಿದೆ. ವೈದಿಕ ಶಾಸ್ತ್ರ ಪರಿಣತರಿಗೆ ಅವರವರ ವಿದ್ಯಾಪ್ರತಿಭೆಗಳಿಂದ ಕರ್ತೃ–ಕರ್ಮ ಸಂಬಂಧ ವೈಶಿಷ್ಟ್ಯಪೂರ್ಣ ಸಂಕಲ್ಪಗಳನ್ನು ತತ್ತತ್ಕಾಲದಲ್ಲಿ ಸಂಕಲ್ಪಿಸಲು ಸಾಧ್ಯ. ಆದರೆ ಅಂತಹ ಶಾಸ್ತ್ರಜ್ಞ ವೈದಿಕೋತ್ತಮರು ಎಲ್ಲಾ ಕಡೆಯಲ್ಲೂ. ಎಲ್ಲಾ ಸಮಯದಲ್ಲೂ ಅಲಭ್ಯವಾದುದರಿಂದ ಎಲ್ಲಾ ವೈದಿಕರಿಗೂ ಸುಲಭಸಾಧ್ಯವಾಗುವಂತೆ ಪ್ರಯೋಗಗಳನ್ನು ಹಾಗೂ ಸಂಕಲ್ಪಗಳನ್ನೂ ಸಿದ್ಧಪಡಿಸಲಾಗಿದೆ. ಒಂದು ಕರ್ಮಕ್ಕೆ ಇಷ್ಟೆ ಫಲವೆಂದು ನಿರ್ಣಯಿಸಲು ಅಸಾಧ್ಯವಾದರೂ ಕರ್ಮದ ಆದಿಯಲ್ಲಿ ಮುಖ್ಯಸಂಕಲ್ಪ ಬೇಕಾಗಿರುತ್ತದೆ. ಅಂತಹ ಸಂಕಲ್ಪಗಳನ್ನು ಇಲ್ಲಿ ಸೇರಿಸಿದೆ. ಇನ್ನೂ ಅನೇಕ

ವೈದಿಕಕರ್ಮಗಳು, ಸಂಕಲ್ಪವಿಧಾನಗಳು ಬೇಕೆಂದು ವೈದಿಕರಿಂದ ಬೇಡಿಕೆಯಿದೆ. ಮುಂದೆ ಗುರುದೇವತಾನುಗ್ರಹದಿಂದ ಅವುಗಳನ್ನೂ ಪ್ರಕಟಿಸುವ ಭಾಗ್ಯ ಪ್ರಾಪ್ತಿಯಾಗಲು ಶಾಸ್ತ್ರಜ್ಞ-ವೇದಜ್ಞ-ವೈದಿಕೋತ್ತಮರ ಆಶೀರ್ವಾದ ಅವಶ್ಯ.

ಈ ಗ್ರಂಥವು ಪ್ರಯೋಗಾಭ್ಯಾಸೀ ವಿದ್ಯಾರ್ಥಿಗಳು, ವೈದಿಕರು, ಪ್ರವಚನಕಾರರು ಹಾಗೂ ಲೌಕಿಕರಿಗೂ ಪ್ರಯೋಜನವಾದೀತು. ವಿದ್ಯಾರ್ಥಿಗಳು ಪ್ರಾಜ್ಞ ವೈದಿಕರ ಮಾರ್ಗದರ್ಶನದಲ್ಲಿ ಈ ಪ್ರಯೋಗಗಳನ್ನು ಅಭ್ಯಾಸ ಮಾಡುವುದು ಉತ್ತಮವು.

### ವೃಷಭದಾನದ ಮಹತ್ತ್ವ :

ಸ್ವರ್ಗವೇ ಮೂರ್ತಿಮತ್ತಾಗಿ ಬಂದಿರುವುದೇ ವೃಷಭ. ಅದಲ್ಲದೇ ಗೋವುಗಳ ಪತಿಯೂ ಆದ ವೃಷಭವನ್ನು ಸದ್ಗುಣಸಂಪನ್ನರಾದ ವಿಪ್ರರಿಗೆ ದಾನಮಾಡಿದವನು ಈ ಲೋಕದಲ್ಲಿ ಸುಖಭೋಗಗಳನ್ನು ಅನುಭವಿಸಿ ದೇಹಾಂತ್ಯದಲ್ಲಿ ಸ್ವರ್ಗಲೋಕದಲ್ಲಿ ವಿರಾಜಮಾನನಾಗುತ್ತಾನೆ ಎಂದು ಮಹಾಭಾರತದಲ್ಲಿ ಉಕ್ತವಾಗಿದೆ.

ಸ್ವರ್ಗೋ ವೈ ಮೂರ್ತಿಮಾನೇಷ ವೃಷಭಂ ಯೋ ಗವಾಂ ಪತಿಮ್ ।
ವಿಪ್ರೇ ಗುಣಯುತೇ ದದ್ಯಾತ್ ಸ ವೈ ಸ್ವರ್ಗೇ ಮಹೀಯತೇ ॥

(ಮ. ಭಾ. ಅ. ಪ. ೧೩.೪೮)

### ಭೂಮಿದಾನದ ಮಹತ್ತ್ವ :

ಯಜ್ಞಾಂಗವಾಗಿ ಭೂಮಿದಾನ ಮಾಡಬೇಕೆಂದು ಶ್ರೀಮನ್ಮಹಾಭಾರತದಲ್ಲಿ ಉಕ್ತವಾಗಿದೆ. ಯಜ್ಞದ ನಿಮಿತ್ತವಾಗಿ ಭೂಮಿದಾನವನ್ನು ಮಾಡುವಾಗ ಯಜ್ಞ-ಯಾಗಾದಿಗಳಿಗೆ ಎಷ್ಟು ಧನ-ಸಂಪತ್ತು ನಿಗದಿ ಮಾಡಿದೆಯೋ ಅದರ ಆರನೇ ಒಂದಂಶವನ್ನು ಭೂಮಿದಾನಕ್ಕೆ ವಿನಿಯೋಗಿಸಬೇಕು. ಯಾರು ಪ್ರತ್ಯುಪಕಾರ ಬಯಸದೆ ಕಿಂಚಿತ್ತಾದರೂ ಭೂಮಿದಾನ ಮಾಡುತ್ತಾರೋ ಅವರು ಎಷ್ಟು ಕಷ್ಟ ಬಂದರೂ ಕುಗ್ಗುವುದಿಲ್ಲ. ಅದಲ್ಲದೆ ಅವನ್ನೆಲ್ಲ ಎದುರಿಸಿ ಸುಖವನ್ನು ಹೊಂದುತ್ತಾರೆ. ಹಾಗೆಯೇ ಶೀತ, ವಾಯು, ಬಿಸಿಲುಗಳಿಂದ ರಕ್ಷಣೆ ಕೊಡುವ ಸುಂದರವಾದ ಭೂಮಿಯುಕ್ತವಾದ ನೂತನಗೃಹವನ್ನು ಯಾವನು ದಾನ ಮಾಡುತ್ತಾನೋ ಆತನು ಈ ಲೋಕದಲ್ಲಿ ಸುಖ-ಭೋಗಗಳನ್ನು ಅನುಭವಿಸಿ ಜೀವನಾಂತ್ಯದಲ್ಲಿ ಪುಣ್ಯದ ಪ್ರಭಾವದಿಂದ ಸ್ವರ್ಗಲೋಕವನ್ನು ಚಿರಕಾಲ ಅನುಭವಿಸುತ್ತಾನೆ. ಅದಲ್ಲದೆ ಅಲ್ಲಿ ಇಂದ್ರತುಲ್ಯನಾಗಿಯೂ ಇರುತ್ತಾನೆ -ಇತ್ಯಾದಿ ಅನೇಕ ಫಲಗಳನ್ನು ಹೇಳಿದೆ-

ಷಷ್ಠಮಂಶಂ ಕ್ರತೋಸ್ತಸ್ಯ ಭೂಮಿದಾನಂ ಪ್ರಚಕ್ರಿರೇ ।
ಪ್ರಾದೇಶಮಾತ್ರಂ ಭೂಮೇಸ್ತು ಯೋ ದದ್ಯಾದನುಪಸ್ಕೃತಾಮ್ ॥ ೨೬ ॥

ನ ಸೀದತಿ ಸ ಕೃಚ್ಛ್ರೇಷು ನ ಚ ದುರ್ಗಾಣ್ಯವಾಪ್ನುತೇ ।
ಶೀತವಾತಾತಪಸಹಾಂ ಗೃಹಭೂಮಿಂ ಸುಸಂಸ್ಕೃತಾಮ್ ॥ ೨೭ ॥

ಪ್ರದಾಯ ಸುರಲೋಕಸ್ಥಃ ಪುಣ್ಯಾಂತೇಽಪಿ ನ ಚಾಲ್ಯತೇ ।
ಮುದಿತೋ ವಸತಿ ಪ್ರಾಜ್ಞಃ ಶಕ್ರೇಣ ಸಹ ಪಾರ್ಥಿವ ॥ ೨೮ ॥

ಪ್ರತಿಶ್ರಯಪ್ರದಾನಾಚ್ಚ ಸೋಽಪಿ ಸ್ವರ್ಗೇ ಮಹೀಯತೇ ।
ಅಧ್ಯಾಪಕಕುಲೇ ಜಾತಃ ಶ್ರೋತ್ರಿಯೋ ನಿಯತೇಂದ್ರಿಯಃ ॥ ೨೯ ॥

ಗೃಹೇ ಯಸ್ಯ ವಸೇತ್ತುಷ್ಟಃ ಪ್ರಧಾನಂ ಲೋಕಮಶ್ನುತೇ ।
ತಥಾ ಗವಾರ್ಥೇ ಶರಣಂ ಶೀತವರ್ಷಸಹಂ ದೃಢಮ್ ॥ ೩೦ ॥

ಆಸಪ್ತಮಂ ಪಾರಯತಿ ಕುಲಂ ಭರತಸತ್ತಮ ।
ಕ್ಷೇತ್ರಭೂಮಿಂ ದದಲ್ಲೋಕೇ ಶುಭಾಂ ಶ್ರಿಯಮವಾಪ್ನುಯಾತ್ ॥ ೩೧ ॥

ರತ್ನಭೂಮಿಂ ಪ್ರದದ್ಯಾತ್ತು ಕುಲವಂಶಂ ಪ್ರವರ್ಧಯೇತ್ ।

**ದಾನಮಾಡಲು ಅಯೋಗ್ಯವಾದ ಭೂಮಿ :**

ಬಂಜರು ಭೂಮಿ, ಸತ್ತ್ವರಹಿತಭೂಮಿ, ಶ್ಮಶಾನ ಅಥವಾ ತತ್ಸದೃಶ ಭೂಮಿ, ಪಾಪಭೂಯಿಷ್ಠ ಭೂಮಿ ಮುಂತಾದುವುಗಳನ್ನು ದಾನ ಮಾಡಬಾರದು.

ನ ಚೋಷರಾಂ ನ ನಿರ್ಗಂಧಾಂ ಮಹೀಂ ದದ್ಯಾತ್ಕಥಂಚನ ॥ ೩೨ ॥

ನ ಶ್ಮಶಾನಪರೀತಾಂ ಚ ನ ಚ ಪಾಪನಿಷೇವಿತಾಮ್ ।

ನಮ್ಮದಲ್ಲದ ಅಥವಾ ಇನ್ನೊಬ್ಬರ ಭೂಮಿಯಲ್ಲಿ ಶ್ರಾದ್ಧಕರ್ಮ ಮಾಡಿದರೂ ಪಿತೃಕರ್ಮದೊಂದಿಗೆ ಶ್ರಾದ್ಧಕರ್ಮವೂ ನಾಶವಾಗುತ್ತದೆ.

ಪಾರಕ್ಯೇ ಭೂಮಿದೇಶೇ ತು ಪಿತೄಣಾಂ ನಿರ್ವಪೇತ್ತು ಯಃ ॥ ೩೩ ॥
ತದ್ಭೂಮಿಂ ವಾಪಿ ಪಿತೃಭಿಃ ಶ್ರಾದ್ಧಕರ್ಮ ವಿಹನ್ಯತೇ ।

ಆದ್ದರಿಂದ ಸ್ವಲ್ಪವಾದರೂ ಭೂಮಿಯನ್ನು ತನ್ನದಾಗಿಸಿಕೊಂಡು (ಧನಾದಿಗಳಿಂದ ಕ್ರಯಣ ಮಾಡಿ) ಭೂಮಿದಾನ ಮಾಡಬೇಕು.

ತಸ್ಮಾತ್ಕ್ರೀತ್ವಾ ಮಹೀಂ ದದ್ಯಾತ್ ಸ್ವಲ್ಪಾಮಪಿ ವಿಚಕ್ಷಣಃ ॥ ೩೪ ॥

ಇಂತಹ (ತನ್ನ ಭೂಮಿಯಲ್ಲಿ) ಪಿತೃಗಳಿಗೆ ಪಿಂಡಪ್ರದಾನ (ಶ್ರಾದ್ಧಕರ್ಮ) ಮಾಡಿದರೆ ಆ ಶ್ರಾದ್ಧವು ಶಾಶ್ವತಫಲವನ್ನು ಕೊಡುತ್ತದೆ–

ಪಿಂಡಃ ಪಿತೃಭ್ಯೋ ದತ್ತೋ ವೈ ತಸ್ಯಾಂ ಭವತಿ ಶಾಶ್ವತಃ ।

ಆದರೆ ಕಾಡು, ಪರ್ವತ, ನದೀತೀರ, ತೀರ್ಥಗಳು (ತೀರ್ಥಕ್ಷೇತ್ರಗಳ ಸಮೀಪ) ಇವುಗಳಿಗೆಲ್ಲ ಸ್ವಾಮಿತ್ವವಿರುವುದಿಲ್ಲ ಮತ್ತು ಅವುಗಳನ್ನು ಪರಿಗ್ರಹ ಮಾಡಲೂಬಾರದು (ಅರ್ಥಾತ್ ದಾನಮಾಡಲೂಬಾರದು ಮತ್ತು ಸ್ವತ್ವವೂ ಇರುವುದಿಲ್ಲ). ಅದನ್ನು ಕೊಡಲೂಬಾರದು. ಅದಲ್ಲದೆ ಅದಕ್ಕೆ ಅಧಿಕಾರಿ ನಾವಾಗಿರುವುದಿಲ್ಲ. ಆದ್ದರಿಂದ ಅಂತಹ ಸ್ಥಳಗಳಲ್ಲಿ ಶ್ರಾದ್ಧಕರ್ಮ ಮಾಡಬಹುದು.

ಅಟವೀಪರ್ವತಾಶ್ಚೈವ ಸದ್ಯಸ್ತೀರ್ಥಾನಿ ಯಾನಿ ಚ ॥ ೩೫ ॥

ಸರ್ವಾಣ್ಯಸ್ವಾಮಿಕಾನ್ಯಾಹುರ್ನಹಿ ತತ್ರ ಪರಿಗ್ರಹಃ ॥ ೩೬ ॥

**ಗೋದಾನದ ಮಹತ್ತ್ವ :**

ಗೋವು ಮೂವತ್ತಮೂರು ಕೋಟಿ ದೇವತೆಗಳ ಆವಾಸಸ್ಥಾನವಾಗಿದೆ. ಗೋವೆಂದರೆ ಪ್ರತ್ಯಕ್ಷದೇವತೆ. ಒಂದು ಗೋಪೂಜೆ ಮಾಡಿದರೆ ಸಕಲ ದೇವತೆಗಳನ್ನೂ ಪೂಜಿಸಿದ ಫಲ ಸಿದ್ಧಿಸುವುದು. 'ರೋಮಸು ತ್ರಯಸ್ತ್ರಿಂಶತ್ ಕೋಟಿ ದೇವತಾಃ ಪ್ರಕೀರ್ತಿತಾಃ' ಕಾಮಧೇನುವಿನ ಪರಂಪರೆಯೇ ಇದಾಗಿದೆ. ಗೋಮಾತೆ ಬ್ರಹ್ಮನ ಪುತ್ರಿಯೂ ಕಲ್ಯಾಣಕಾರಿಣಿಯೂ ಆಗಿದ್ದಾಳೆ. ಗೋವಿನ ಅಂಗಾಂಗಗಳಲ್ಲಿ ಹದಿನಾಲ್ಕು ಲೋಕಗಳೂ ಇವೆ. ಆದ್ದರಿಂದ ಅದರ ದಾನದಿಂದ ಈ ಲೋಕ ಹಾಗೂ ಪರಲೋಕದಲ್ಲಿಯೂ ಮಂಗಳವಾಗುತ್ತದೆ.

ನಮೋ ಗೋಭ್ಯಃ ಶ್ರೀಮತೀಭ್ಯಃ ಸೌರಭೇಯೀಭ್ಯ ಏವ ಚ ।
ನಮೋ ಬ್ರಹ್ಮಸುತಾಭ್ಯಶ್ಚ ಪವಿತ್ರಾಭ್ಯೋ ನಮೋ ನಮಃ ॥
ಗವಾಮಂಗೇಷು ತಿಷ್ಠಂತಿ ಭುವನಾನಿ ಚತುರ್ದಶ ।
ಯಸ್ಮಾತ್ ತಸ್ಮಾಚ್ಛಿವಂ ಮೇ ಸ್ಯಾದಿಹಲೋಕೇ ಪರತ್ರ ಚ ॥

ಗೋವಿನ ಸ್ಮರಣಮಾತ್ರದಿಂದ ಸರ್ವಪಾಪನಾಶವಾಗುವುದು. ಗೋವು ತ್ರಿಲೋಕಕ್ಕೂ ಮಾತೆ. ಸಂಸಾರಸಾಗರದ ಮಾತೆ. ಗೋವೇ ವಸುಂಧರಾ, ಗಾಯತ್ರೀ, ಸಾವಿತ್ರಿ, ಗಂಗೆ ಹಾಗೂ ಸರಸ್ವತಿ.

ಯಸ್ಯಾಃ ಸ್ಮರಣಮಾತ್ರೇಣ ಸರ್ವಪಾಪಪ್ರಣಾಶನಮ್ ।
ತ್ವಂ ದೇವೀ ತ್ವಂ ಜಗನ್ಮಾತಾ ತ್ವಮೇವಾಸಿ ವಸುಂಧರಾ ।
ಗಾಯತ್ರೀ ತ್ವಂ ಚ ಸಾವಿತ್ರೀ ಗಂಗಾ ತ್ವಂ ಚ ಸರಸ್ವತೀ ॥

ಗೋವಿನ ಕ್ಷೀರವು ಅಮೃತವೇ ಆಗಿದೆ ಎಂದು ಇಂದ್ರನು ಹೇಳಿದ್ದಾನೆ. ಆದ್ದರಿಂದ ಯಾರು ಗೋದಾನ ಮಾಡುತ್ತಾನೋ ಅವನು ಅಮೃತವನ್ನೇ ಕೊಡುತ್ತಾನೆ.

ಅಮೃತಂ ವೈ ಗವಾಂ ಕ್ಷೀರಮಿತ್ಯಾಹ ತ್ರಿದಶಾಧಿಪಃ ।
ತಸ್ಮಾತ್ ದದಾತಿ ಯೋ ಧೇನುಂ ಅಮೃತಂ ಸ ಪ್ರಯಚ್ಛತಿ ॥

(ಮ. ಭಾ. ಅ. ಪ. ೬೬೪೬)

ಸಮಸ್ತಪ್ರಾಣಿಗಳಿಗೂ ವಿಶೇಷವಾಗಿ ಮನುಷ್ಯರಿಗೆ ಪ್ರಾಣಪ್ರಾಯವಾದ ಅಮೃತದಂತಹ ಹಾಲನ್ನು ಕೊಡುವುದರಿಂದ ಗೋಮಾತೆಯು ಪ್ರಾಣವೇ ಆಗಿದ್ದಾಳೆ. ಅಂತಹ ಅಮೃತಪ್ರಾಯವಾದ ಹಾಲಿರುವ 'ಧೇನುದಾನ'ವನ್ನು ಯಾವನು ಮಾಡುತ್ತಾನೋ ಅವನು ಪ್ರಾಣಗಳನ್ನೇ ಕೊಟ್ಟಂತೆ. ಅದರಿಂದ ಪ್ರಾಣಪ್ರಾಪ್ತವಾಗುವುದು. ಗೋವು ಸಕಲಜೀವಿಗಳಿಗೂ ಶರಣ್ಯಳು ಎಂದು ವೇದಜ್ಞರು ತಿಳಿದಿದ್ದಾರೆ. ಆದ್ದರಿಂದ ಯಾರು ಧೇನುದಾನವನ್ನು ಮಾಡುತ್ತಾರೋ ಅವರು ಸಕಲರಿಂದ ಶರಣ್ಯ(ಶ್ರೇಷ್ಠ)ರಾಗುತ್ತಾರೆ.

ಪ್ರಾಣಾ ವೈ ಪ್ರಾಣಿನಾಮೇತೇ ಪ್ರೋಚ್ಯಂತೇ ಭರತರ್ಷಭ ।
ತಸ್ಮಾದ್ದದಾತಿ ಯೋ ಧೇನುಂ ಪ್ರಾಣಾನೇಷ ಪ್ರಯಚ್ಛತಿ ॥
ಗಾವಃ ಶರಣ್ಯಾ ಭೂತಾನಾಮಿತಿ ವೇದವಿದೋ ವಿದುಃ ।
ತಸ್ಮಾದ್ದದಾತಿ ಯೋ ಧೇನುಂ ಶರಣಂ ಸಂಪ್ರಯಚ್ಛತಿ ॥

(ಮ. ಭಾ. ಅ. ಪ. ೬೬ ಶ್ಲೋ. ೪೯, ೫೦)

ವಧಿಸುವುದಕ್ಕಾಗಿ, ನಾಸ್ತಿಕನಿಗೆ ಅಥವಾ ಗೋವಿನಿಂದಲೇ ಜೀವಿಕೆ ಮಾಡುವವನಿಗೆ ಪಾಪಕರ್ಮಿಗಳಿಗೆ, ಗೋದಾನ ಮಾಡಬಾರದು. ಅಂತಹವರಿಗೆ ದಾನ ಮಾಡಿದವನು ಕ್ಷಯರಹಿತವಾದ ನರಕವನ್ನು ಹೊಂದುತ್ತಾನೆ.

ನ ವಧಾರ್ಥಂ ಪ್ರದಾತವ್ಯಾ... ಅಕ್ಷಯಂ ನರಕಂ ಯಾತೀತ್ಯೇವಮಾಹುರ್ಮಹರ್ಷಯಃ ॥ (ಮ. ಭಾ. ಅ. ಪ. ೬೬, ೫೧, ೫೨)

ಗೋದಾನದಿಂದ ದಾನಿಯ ಹಿಂದಿನ ಮತ್ತು ಮುಂದಿನ ಏಳು ತಲೆಮಾರಿನವರು ಉದ್ಧಾರವಾಗುತ್ತಾರೆ.

ಗೋಪ್ರದಾನಾತ್ತಾರಯತೇ ಸಪ್ತ ಪೂರ್ವಾಂಸ್ತಥಾಪರಾನ್ ।

(ಮ. ಭಾ. ಅ. ಪ. ೭೪-೮)

ಯಾವನು ಗೋವು ಮತ್ತು ಹೋರಿಯನ್ನು ಒಟ್ಟಿಗೇ ದಾನ ಮಾಡುತ್ತಾನೋ ಅವನು ವೇದಾಧ್ಯಯನ ಫಲವನ್ನು ಹೊಂದುತ್ತಾನೆ. ವಿಧಿವತ್ತಾಗಿ ಗೋಪ್ರದಾನ ಮಾಡುವವನಿಗೆ ಉತ್ತಮ ಲೋಕಪ್ರಾಪ್ತಿಯಾಗುವುದು.

ವೇದವ್ರತೀ ಸ್ಯಾದ್ ವೃಷಭಪ್ರದಾನೇ ವೇದಾವಾಪ್ತಿರ್ಗೋಯುಗಸ್ಯ ಪ್ರದಾನೇ ।
ತಥಾ ಗವಾಂ ವಿಧಿಮಾಸಾದ್ಯ ಯಜ್ವಾ ಲೋಕಾನಗ್ರ್ಯಾನ್ ವಿಂದತಿ ನಾವಿಧಿಜ್ಞಃ ॥

(ಮ. ಭಾ. ಅ. ಪ. ೭೬-೨೦)

**ಕಪಿಲಾಧೇನುದಾನದ ಮಹತ್ತ್ವ :**

ನ್ಯಾಯಾರ್ಜಿತವಾದ ಕಪಿಲಾಜಾತಿಯ ಒಂದು ಗೋದಾನವನ್ನು ಮಾಡಿದರೂ ಸಮಸ್ತದೋಷಗಳಿಂದ ನಿವೃತ್ತಿ ಹೊಂದಬಹುದು. ಈ ವರ್ಣದ ಗೋವಿನ ರಸವು ಅತ್ಯಂತ ಶ್ರೇಷ್ಠವಾದುದು.

ಗಾಮಪ್ಯೇಕಾಂ ಕಪಿಲಾಂ ಸಂಪ್ರದಾಯ
ನ್ಯಾಯೋಪೇತಾಂ ಕಲುಷಾದ್ವಿಪ್ರಮುಚ್ಯೇತ್ ।
ಗವಾಂ ರಸಾತ್ಪರಮಂ ನಾಸ್ತಿ ಕಿಂಚಿತ್
ಗವಾಂ ಪ್ರದಾನಂ ಸುಮಹದ್ವದಂತಿ ॥ (ಮ. ಭಾ. ಅ. ಪ. ೭೧-೫೧)

ಕಪಿಲಾಧೇನು ದಾನದಿಂದ ಪಾಪಗಳ ನಿವಾರಣೆಯಾಗುತ್ತದೆ. 'ಪಾಪೋತ್ಸರ್ಗಃ ಕಪಿಲಾಯಾಃ ಪ್ರದಾನೇ' (ಮ. ಭಾ. ಅ. ಪ. ೭೧-೫೦) ಗರುಡಪುರಾಣದಲ್ಲಿಯೂ ಸರ್ವಪಾಪನಿವಾರಣೆಗೆ 'ಕಪಿಲಾಧೇನು'ದಾನ ಶ್ರೇಷ್ಠವೆಂದಿದೆ.

ದತ್ವಾ ಧೇನುಂ ಸಕೃದ್ವಾಪಿ ಕಪಿಲಾಂ ಕ್ಷೀರಸಂಯುತಾಮ್ ।
ಸೋಪಸ್ಕರಾಂ ಸವತ್ಸಾಂ ಚ ತಪೋವೃತ್ತಸಮನ್ವಿತೇ ॥ (ಗ. ಪು. ೮-೬೦)

ಯಾವ ರೀತಿ ಗಂಗೆಯು ನದಿಗಳಲ್ಲಿ ಶ್ರೇಷ್ಠವೋ ಅದೇ ರೀತಿ ಅರ್ಜುನಿಯರಲ್ಲಿ ಕಪಿಲಾಧೇನು ಉತ್ತಮಳು. 'ಯಥಾ ಹಿ ಗಂಗಾ ಸರಿತಾಂ ವರಿಷ್ಠಾ ತಥಾರ್ಜುನೀನಾಂ ಕಪಿಲಾ ವರಿಷ್ಠಾ' (ಮ. ಭಾ. ಅ. ಪ. ೭೭-೮) ಕಪಿಲಾಧೇನುವಿನ ವಿಶೇಷವನ್ನು ಮತ್ತು ವಿಶೇಷಪ್ರಭಾವವನ್ನು ಕೇಳಲು ಇಚ್ಛಿಸುತ್ತೇನೆ ಎಂದು ಯುಧಿಷ್ಠಿರಮಹಾರಾಜ ಭೀಷ್ಮಪಿತಾಮಹರಲ್ಲಿ ಕೇಳಿದಾಗ ವಿಸ್ತಾರವಾಗಿ ಕಪಿಲೆಯ ಮಹತ್ತ್ವವನ್ನು ಶ್ರೀಮಹಾಭಾರತದ ಅನುಶಾಸನಪರ್ವ, ದಾನಧರ್ಮಪರ್ವದಲ್ಲಿ ಗೋಪ್ರಭವ ಕಥಾನಕದಲ್ಲಿ (ಮ. ಭಾ. ಅ. ಪ. ೭೭) ಹೇಳಿರುತ್ತಾರೆ. 'ಸುವರ್ಣವರ್ಣಾಃ ಕಪಿಲಾಃ ಪ್ರಜಾನಾಂ ವೃತ್ತಿಧೇನವಃ' ಎಂದೂ ಉಕ್ತವಾಗಿದೆ.

ಬೇರೆ ಬೇರೆ ಕಾಲದಲ್ಲಿ ಮತ್ತು ಇತರೇತರನಿಮಿತ್ತವಾಗಿ ಗೋದಾನಗಳನ್ನು ಹೇಳಿದೆ :

೧. ಅಂತ್ಯಕಾಲದಲ್ಲಿ ಅಂತಧೇನುದಾನ ೨. ಮೃತ್ಯುವಿನ ನಿವಾರಣೆಗೆ ರುದ್ರಧೇನುದಾನ ೩. ಗೊತ್ತಿದ್ದೋ ಗೊತ್ತಿಲ್ಲದೆಯೋ ಮಾಡಿದ ಋಣಪರಿಹಾರಕ್ಕೆ ಋಣಧೇನುದಾನ ೪. ಮೋಕ್ಷಪ್ರಾಪ್ತಿಗೆ ಮೋಕ್ಷಧೇನುದಾನ ಮಾಡಬೇಕು.

ತತೋಽಂತಧೇನುರ್ದಾತವ್ಯಾ ರುದ್ರಧೇನುಂ ಪ್ರದಾಪಯೇತ್ ।
ಋಣಧೇನುಂ ತತೋ ದತ್ವಾ ಮೋಕ್ಷಧೇನುಂ ಪ್ರದಾಪಯೇತ್ ॥

(ಗ. ಪು. ೮-೫೬)

ವೈತರಣೀನದಿಯನ್ನು ದಾಟಲು ವಿಶೇಷವಿಧಿಯಿಂದ ಗೋದಾನ ಮಾಡಬೇಕು. ಐದು ತರಹದ ಗೋದಾನಗಳು ಮಾನವನನ್ನು ಮನಸ್ಸಿನಿಂದ, ಮಾತಿನಿಂದ ಮತ್ತು ದೇಹಗಳಿಂದ ಮಾಡಿದ ಪಾಪಗಳಿಂದ ವಿರಹಿತನನ್ನಾಗಿ ಮಾಡುತ್ತವೆ.

ದದ್ಯಾದ್ವೈತರಣೀಂ ಧೇನುಂ ವಿಶೇಷವಿಧಿನಾ ಖಗ ।
ತಾರಯಂತಿ ನರಂ ಗಾವಸ್ತ್ರಿವಿಧಾಚ್ಚೈವ ಪಾತಕಾತ್ ॥ (ಗ. ಪು. ೮-೫೭)

ಇದಲ್ಲದೆ ಬಾಲ್ಯಾವಸ್ಥೆ, ಕೌಮಾರಾವಸ್ಥೆ, ಯೌವನಾವಸ್ಥೆ, ವೃದ್ಧಾವಸ್ಥೆ ಮತ್ತು ಜನ್ಮಾಂತರದಲ್ಲಿ ಮಾಡಿದ ಇನ್ನೂ ಅನೇಕ ವಿಧದ ಪಾಪಗಳೂ ನಿವೃತ್ತಿಯಾಗುತ್ತವೆ.

ಬಾಲತ್ವೇ ಯಚ್ಚ ಕೌಮಾರೇ ಯತ್ಪಾಪಂ ಯೌವನೇ ಕೃತಮ್ ।
ವಯಃ ಪರಿಣತೌ ಯಚ್ಚ ಯಚ್ಚ ಜನ್ಮಾಂತರೇಷ್ವಪಿ ॥ (ಗ. ಪು. ೮-೫೮)

ಪಾಪಗಳ ನಿವೃತ್ತಿಯಾಗಬೇಕೆಂದು ಯಾರು ಇಚ್ಛಿಸುತ್ತಾರೋ ಅವರು ಗೋದಾನ ಮಾಡಬೇಕು. ಪ್ರಾಯಶ್ಚಿತ್ತಾದಿಗಳಲ್ಲಿ, ಕೃಚ್ಛ್ರಾಚರಣೆಯಲ್ಲಿ, (ತ್ರಿಂಶತ್) ಮೂವತ್ತು ಗೋದಾನ ಇತ್ಯಾದಿ ಹೇಳಿದೆ. ಅದಲ್ಲದೆ ನಮ್ಮಿಂದ ಮನೋವಾಕ್ಕಾಯಗಳಿಂದ ರಾತ್ರಿ, ಪ್ರಾತಃಕಾಲ, ಮಧ್ಯಾಹ್ನ, ಅಪರಾಹ್ಣ ಮತ್ತು ಎರಡೂ ಸಂಧ್ಯಾಕಾಲಗಳಲ್ಲಿ ಮಾಡಲಾದ ಪಾಪಗಳೂ ಗೋದಾನದಿಂದ ನಾಶವಾಗುತ್ತವೆ.

ಯನ್ನಿಶಾಯಾಂ ತಥಾ ಪ್ರಾತರ್ಯನ್ಮಧ್ಯಾಹ್ನಾಪರಾಹ್ಣಯೋಃ ।
ಸಂಧ್ಯಯೋರ್ಯತ್ಕೃತಂ ಪಾಪಂ ಕಾಯೇನ ಮನಸಾ ಗಿರಾ ॥
(ಗ. ಪು. ೮-೫೯)

ದಾನಾದಿಗಳಿಗೆ ಪುಣ್ಯಕಾಲಗಳು ಶ್ರೇಷ್ಠವೆಂದಿದೆ. 'ತಸ್ಮಾದವಶ್ಯಂ ದಾತವ್ಯಂ ಪುಣ್ಯಕಾಲೇಷು ಸರ್ವದಾ' ಗಂಗಾದಿಸರ್ವತೀರ್ಥಗಳಲ್ಲಿ, ಸತ್ಪಾತ್ರರಾದ ಬ್ರಾಹ್ಮಣರ ಮನೆ, ಚಂದ್ರ-ಸೂರ್ಯರ ಗ್ರಹಣಕಾಲದಲ್ಲಿ, ಸಂಕ್ರಾಂತಿಯ ಪರ್ವದಿನ, ಅಮಾವಾಸ್ಯೆಯ ದಿನ ಉತ್ತರಾಯಣ-ದಕ್ಷಿಣಾಯನ ಆರಂಭಕಾಲ, (ಮಕರ-ಕರ್ಕಟಕ ಸಂಕ್ರಮಣಕಾಲಗಳು ಉತ್ತರಾಯಣ-ದಕ್ಷಿಣಾಯನಗಳು, ಮೇಷ ಮತ್ತು ತುಲಾಸಂಕ್ರಮಣಕಾಲಗಳನ್ನು 'ವಿಷುವಕಾಲ'ವೆನ್ನುತ್ತಾರೆ ಹಾಗೂ ಆ ದಿವಸ ಹಗಲು ಮತ್ತು ರಾತ್ರಿಗಳು ಸಮವಾಗಿರುತ್ತವೆ. 'ಸಮರಾತ್ರಿಂ ದಿವೇ ಕಾಲೇ ವಿಷುವತ್... ಸ್ಮೃತಂ') ವ್ಯತೀಪಾತ, ಅಕ್ಷಯ್ಯತೃತೀಯಾ, ಅದಲ್ಲದೆ ಬೇರೆ ಪುಣ್ಯಕಾಲದಲ್ಲಿಯೂ ಗೋದಾನ ಮಾಡಬೇಕು.

ಗಂಗಾದಿ ಸರ್ವತೀರ್ಥೇಷು ಬ್ರಾಹ್ಮಣಾವಸಥೇಷು ಚ ।
ಚಂದ್ರಸೂರ್ಯೋಪರಾಗೇಷು ಸಂಕ್ರಾಂತೌ ದರ್ಶವಾಸರೇ ॥
(ಗ. ಪು. ೮-೬೭)

ಅಯನೇ ವಿಷುವೇ ಚೈವ ವ್ಯತೀಪಾತೇ ಯುಗಾದಿಷು ।
ಅನ್ಯೇಷು ಪುಣ್ಯಕಾಲೇಷು ದದ್ಯಾದ್ಗೋದಾನಮುತ್ತಮಮ್ ॥

(ಗ. ಪು. ೮-೮೮)

ಅಥವಾ ಯಾವಾಗ ಶ್ರದ್ಧೆ, ಭಕ್ತಿಗಳು ಹುಟ್ಟುತ್ತವೋ ಅಥವಾ ಸತ್ಪಾತ್ರರು ದೊರಕುತ್ತಾರೋ ಅದುವೇ ಪುಣ್ಯಕಾಲವೆಂದು ತಿಳಿದು ದಾನ ಮಾಡಬೇಕು. (ಇದು ಎಲ್ಲಾ ವಿಧದ ದಾನಗಳಿಗೂ ಅನ್ವಯವಾಗುವುದು) ಯಾಕೆಂದರೆ ಸಂಪತ್ತು ಸ್ಥಿರವಲ್ಲ. ಚಂಚಲವಾದುದು. ಪುಣ್ಯಕಾಲ ಬರಲಿ ಎಂದು ಕಾದು ಕುಳಿತರೆ ಆವಾಗ ಸಂಪತ್ತು ಇದ್ದರೆ ದಾನ ಮಾಡಬಹುದು. ಆದರೆ ಅಷ್ಟರ ತನಕ ಸಂಪತ್ತುಳಿಯದಿದ್ದರೆ?

ಯದೈವ ಜಾಯತೇ ಶ್ರದ್ಧಾ ಪಾತ್ರಂ ಸಂಪ್ರಾಪ್ಯತೇ ಯದಾ ।
ಸ ಏವ ಪುಣ್ಯಕಾಲಃ ಸ್ಯಾತ್ ಯತಃ ಸಂಪತ್ತಿರಸ್ಥಿರಾ ॥ (ಗ. ಪು. ೮-೮೯)

ಈ ದೇಹವು ಅಸ್ಥಿರವಿರುತ್ತದೆ ಮತ್ತು ಈ ಐಶ್ವರ್ಯವಾದರೂ ನಿರಂತರ ಇರುವುದೆಂದು ನಿಶ್ಚಯವಿಲ್ಲ. ಮೃತ್ಯು ನಿತ್ಯ ಹತ್ತಿರದಲ್ಲಿಯೇ ಇರುತ್ತದೆ. ('ಗೃಹೀತ ಇವ ಕೇಶೇಷು ಮೃತ್ಯುನಾ ಧರ್ಮಮಾಚರೇತ್'. ನಮ್ಮ ಕೂದಲನ್ನು ಮೃತ್ಯುವು ಹಿಡಿದಂತೆ ಧರ್ಮಾಚರಣೆ ಮಾಡಬೇಕು) ಆದ್ದರಿಂದ ಧರ್ಮಕಾರ್ಯಗಳನ್ನು ಮಾಡುತ್ತಾ ಧರ್ಮಸಂಚಯ ಮಾಡಬೇಕು.

ಅಸ್ಥಿರಾಣಿ ಶರೀರಾಣಿ ವಿಭವೋ ನೈವ ಶಾಶ್ವತಃ ।
ನಿತ್ಯಂ ಸನ್ನಿಹಿತೋ ಮೃತ್ಯುಃ ಕರ್ತವ್ಯೋ ಧರ್ಮಸಂಚಯಃ ॥

(ಗ. ಪು. ೮-೯೦)

ಈ ಪ್ರಪಂಚವೇ ಪರಮಾತ್ಮನ ವಿಧಿ-ನಿಯಮದಂತೆ ಅಥವಾ ಅವನ ಭಯದಿಂದ ನಡೆಯುತ್ತಾ ಇರುತ್ತದೆ. ಪರಮಾತ್ಮನ ಭಯದಿಂದಲೇ ವಾಯುಸಂಚಾರ ಮಾಡುತ್ತಾನೆ. ಸೂರ್ಯನು ಸರಿಯಾದ (ಸಮಯದಲ್ಲಿ) ಕಾಲಕಾಲದಲ್ಲಿ ಉದಯಾಸ್ತಮಾನ ವಾಗುತ್ತಾನೆ.

ಅದೇ ರೀತಿ ಅಗ್ನಿ, ಇಂದ್ರಾದಿ ದೇವತೆಗಳೂ ಅವರವರ ಕರ್ತವ್ಯಗಳನ್ನು ಮಾಡುತ್ತಾ ಇರುತ್ತಾರೆ. ಪ್ರಕೃತಿಗಳು (ಪಂಚಭೂತಗಳೂ) ಪರಮಾತ್ಮನ 'ಆಜ್ಞೆ'ಯಂತೆ ಕಾರ್ಯ ಮಾಡುತ್ತವೆ. ಅದನ್ನೇ ತೈತ್ತಿರೀಯ ಆರಣ್ಯಕೋಪನಿಷತ್ತಿನಲ್ಲಿ-

ಭೀಷಾಸ್ಮಾದ್ವಾತಃ ಪವತೇ । ಭೀಷೋದೇತಿ ಸೂರ್ಯಃ । ಭೀಷಾಸ್ಮಾದಗ್ನಿ ಶ್ಚೇಂದ್ರಶ್ಚ । ಎಂದು ಶ್ರುತ್ಯುಕ್ತಿ. ಅದೇ ರೀತಿ ಮೃತ್ಯುವೂ ಕೂಡ ಐದನೆಯವನಂತೆ ನಮ್ಮೊಂದಿಗೇ ಇದೆ. ಅದರ ಕರ್ತವ್ಯ ಮಾಡುತ್ತಾ ಇರುತ್ತದೆ.

ಮೃತ್ಯುರ್ಧಾವತಿ ಪಂಚಮ ಇತಿ ।

ಭಗವತ್ಪಾದ ಶ್ರೀಶಂಕರಾಚಾರ್ಯರು ತಮ್ಮ ಭಜಗೋವಿಂದವೆಂಬ 'ವೇದಾಂತಶಾಸ್ತ್ರ' ಬೋಧಿಸುವ ಸುಲಲಿತವಾದ ಸುಂದರವಾದ ಶ್ಲೋಕಗಳಲ್ಲಿ ಇದನ್ನು ಹೇಳಿದ್ದಾರೆ. ಎಷ್ಟರತನಕ ತಾನು ಸಂಪಾದನೆ ಮಾಡಲು ಶಕ್ತನೋ ಅಷ್ಟರತನಕ ತನ್ನ ಪರಿವಾರವಿರುತ್ತದೆ. ತನ್ನ ಸಂಚಯ(ಧನಸಂಚಯ)ವಿಲ್ಲದೇ ವೃದ್ಧಾಪ್ಯದಲ್ಲಿ ಸಂಪಾದನೆಯೂ (ಧರ್ಮಸಂಚಯವೂ) ಇಲ್ಲದಿದ್ದರೆ ಅವನ ಮನೆಯಲ್ಲಿ ಅವನ ಬಗ್ಗೆ ತಾತ್ಸಾರದಿಂದ ಅವನ ಬೇಕು-ಬೇಡ, ಸುಖ-ದುಃಖ, ಅನ್ನ-ಪಾನಾದಿಗಳ ವಿಚಾರವಾಗಿ ಯಾರೂ ವಿಚಾರಿಸುವುದಿಲ್ಲ. ಅದಲ್ಲದೇ ತುಚ್ಛವಾಗಿಯೂ ಕಾಣುತ್ತಾರೆ.

ಯಾವದ್ವಿತ್ತೋಪಾರ್ಜನಸಕ್ತಃ
ತಾವನ್ನಿಜಪರಿವಾರೋ ರಕ್ತಃ ।
ಪಶ್ಚಾಜ್ಜೀವತಿ ಜರ್ಝರದೇಹೇ
ವಾರ್ತಾಂ ಕೋಽಪಿ ನ ಪೃಚ್ಛತಿ ಗೇಹೇ ॥ (ಭ. ಗೋ.)

ಆದ್ದರಿಂದಲೇ

ಎಲೈ ಮಾನವನೇ! ತನಗೆ ಧನಬಲ, ಜನಬಲ ಮತ್ತು ಯೌವನಬಲವಿದೆ ಎಂದು ಗರ್ವಪಡಬೇಡ. ಒಂದೇ ನಿಮಿಷ (ಕ್ಷಣ)ದಲ್ಲಿ ಕಾಲವು (ಕರ್ಮಾಧಿಪತಿ, ಪರಮಾತ್ಮಾ) ಇವೆಲ್ಲವನ್ನೂ ನಾಶಮಾಡಬಲ್ಲದು. ಇವೆಲ್ಲವೂ ಮಾಯೆಯಿಂದ (ಪ್ರಕೃತಿಯಿಂದ) ಸೃಷ್ಟಿಯಾದದ್ದು. ಆದ್ದರಿಂದ ಮಾಯೆಯೇ ಆಗಿದೆ. ಯಥಾರ್ಥವಾಗಿ ಇದು ಇಲ್ಲ. ಆದ್ದರಿಂದ ಇದು 'ಮಾಯೆಯೇ' ಎಂದು ನಿರ್ಣಯಿಸಿ ನಿತ್ಯ-ನಿರಂತರ-ಅಕ್ಷರ-ಶಾಶ್ವತವಾದ ಬ್ರಹ್ಮಪದವನ್ನು 'ಬ್ರಹ್ಮಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ' ಎಂದು ತಿಳಿದು ಅದನ್ನು ಸೇರಿ ಬ್ರಹ್ಮನಾಗು.

ಮಾ ಕುರು ಧನ-ಜನ-ಯೌವನಗರ್ವಮ್
ಹರತಿ ನಿಮೇಷಾತ್ಕಾಲಃ ಸರ್ವಮ್ ।
ಮಾಯಾಮಯಮಿದಮಖಿಲಂ ಹಿತ್ವಾ
ಬ್ರಹ್ಮಪದಂ ತ್ವಂ ಪ್ರವಿಶ ವಿದಿತ್ವಾ ॥ (ಭ. ಗೋ.)

ಹಗಲು, ರಾತ್ರಿ, ಸಾಯಂಕಾಲ, ಪ್ರಾತಃಕಾಲ (ಸಂವತ್ಸರದ ಅಂತ್ಯಋತು) ಶಿಶಿರಋತು (ಆರಂಭದ ಋತು) ವಸಂತಋತು ಇವೆಲ್ಲವೂ ಪುನಃ ಪುನಃ ಬರುತ್ತವೆ ಮತ್ತು ಹೋಗುತ್ತವೆ. ಇದು ಕಾಲಪುರುಷನ ಕ್ರೀಡೆ (ಆಟ). ಈ ಆಟದ ಮೂಲಕ ಮನುಷ್ಯನ ಆಯುಸ್ಸು ಕಳೆದುಹೋಗುತ್ತಾ ಇರುತ್ತದೆ. ಇದನ್ನೆಲ್ಲ ತಿಳಿದಿದ್ದರೂ 'ಆಸೆ'ಯೆಂಬ ವಾಯುವು (ಆಸೆಯ ಪಾಶವು) ಬಿಟ್ಟುಹೋಗುವುದಿಲ್ಲ.

ದಿನಯಾಮಿನ್ಯೌ ಸಾಯಂಪ್ರಾತಃ
ಶಿಶಿರವಸಂತೌ ಪುನರಾಯಾತಃ ।
ಕಾಲಃ ಕ್ರೀಡತಿ ಗಚ್ಛತ್ಯಾಯುಃ
ತದಪಿ ನ ಮುಂಚತ್ಯಾಶಾವಾಯುಃ ॥ (ಭ. ಗೋ.)

ಮನಸ್ಸು, ಬುದ್ಧಿ, ಚಿತ್ತ ಮತ್ತು ಅಹಂಕಾರ ಇವು ನಾಲ್ಕು ಅಂತಃಕರಣಗಳು. ಇವು ಪೂರ್ವಜನ್ಮದಲ್ಲಿ ಮಾಡಿದ ಶುಭ-ಅಶುಭ (ಸುಕೃತ-ದುಷ್ಕೃತ) ಕರ್ಮವಾಸನಾ ಯುಕ್ತವಾಗಿರುತ್ತದೆ. ಇದುವೇ ಸಾತ್ತ್ವಿಕ, ರಾಜಸಿಕ, ತಾಮಸಿಕ ಕರ್ಮಗಳಿಗೆ ಪ್ರಚೋದನಾರೂಪವಾಗಿರುತ್ತದೆ. ಇದನ್ನೇ ಕರ್ಮವಾಸನೆ, ಸಂಸ್ಕಾರ ಇತ್ಯಾದಿಗಳಿಂದ ಹೇಳುತ್ತಾರೆ.

ಮನೋಬುದ್ಧಿರಹಂಕಾರಶ್ಚಿತ್ತಂ ಚೇತಿ ಚತುಷ್ಟಯಮ್ ।
ಅಂತಃಕರಣಮುದ್ದಿಷ್ಟಂ ಪೂರ್ವಕರ್ಮಾಧಿವಾಸಿತಮ್ ॥
(ಗ. ಪು. ೧೫-೩೧)

ಧನವು ಅನರ್ಥಕಾರಿಯೆಂದು ನಿತ್ಯಲೂ ಭಾವಿಸು. ಧನದಿಂದ ಸತ್ಯವಾದ ಸುಖಲೇಶವೂ ಇಲ್ಲ. ಹಣವನ್ನು ಅನುಭವಿಸದೇ ಅಥವಾ ದಾನವನ್ನು ಮಾಡದೇ ಅತ್ಯಾಸೆಯಿಂದ ಧನಸಂಪತ್ತನ್ನು ಕೂಡಿಟ್ಟವನಿಗೆ ತನ್ನ ಮಗನಿಂದಲೂ ಸಹ ವಿಪತ್ತು (ಧನ ಅಪಹರಿಸಬಹುದೆಂಬ) ಬಂದೀತೆಂಬ ಭಯವಿರುತ್ತದೆ. ಆದ್ದರಿಂದ ಅಂತಹವರು ಧನಖಜಾನೆ (ಮುತ್ತು, ರತ್ನ-ಚಿನ್ನ-ಬೆಳ್ಳಿ-ಧನಗಳನ್ನಿಟ್ಟ ಕೊಠಡಿ ಅಥವಾ ಪೆಟ್ಟಿಗೆ) ಕೀಲಿಕೈಯನ್ನು ತನ್ನಲ್ಲಿಯೇ ಇಟ್ಟುಕೊಂಡಿರುತ್ತಾರೆ. ಕೆಲವರು ತಮಗೆ ವೃದ್ಧಾಪ್ಯ ಬಂದರೂ ಧನ-ಕನಕ-ವಸ್ತು-ವಾಹನ-ಆಸ್ತಿಗಳ ಜವಾಬ್ದಾರಿಗಳನ್ನು ಮಕ್ಕಳಿಗೆ ಕೊಡುವುದಿಲ್ಲ; ತಾವೂ ಅನುಭವಿಸುವುದಿಲ್ಲ. ಹಾಗೂ ದಾನ-ಧರ್ಮಗಳನ್ನೂ ಮಾಡದಿದ್ದರೆ ಅಂಥವರ ಧನ-ಸಂಪತ್ತುಗಳು ಇತರರಿಗಾಗಿಯೇ ಇದೆ.

ಅರ್ಥಮನರ್ಥಂ ಭಾವಯ ನಿತ್ಯಮ್
ನಾಸ್ತಿ ತತಃ ಸುಖಲೇಶಃ ಸತ್ಯಮ್ ।
ಪುತ್ರಾದಪಿ ಧನಭಾಜಾಂ ಭೀತಿಃ
ಸರ್ವತ್ರೈಷಾ ವಿಹಿತಾ ರೀತಿಃ ॥ (ಭ. ಗೋ. ೨೮)

ಆದುದರಿಂದ ಸಜ್ಜನರ ಸಹವಾಸದಲ್ಲಿರುವಂತೆ ಮನಸ್ಸನ್ನು ಪ್ರೇರೇಪಿಸಬೇಕು ಹಾಗೂ ದೀನಜನರಿಗೆ ಧನಸಹಾಯವನ್ನೂ ಮಾಡಬೇಕು. 'ನೇಯಂ ಸಜ್ಜನಸಂಗೇ ಚಿತ್ತಂ ದೇಯಂ ದೀನಜನಾಯ ಚ ವಿತ್ತಂ.' ಧನವು ತುಂಬಾ ಬರಲಿ, ಧನವಂತನಾಗ ಬೇಕೆಂದು ದುರ್ಮಾರ್ಗದಿಂದ ಹಣ ಸಂಪಾದಿಸಬೇಡ. ಆ ಆಸೆಯನ್ನು ಬಿಡು.

ಮನಸ್ಸಿನ ಆ ಆಸೆಯನ್ನು ತೊರೆದು ಸದ್ವಿಚಾರವನ್ನು ಮಾಡಬೇಕೆಂಬ ಬುದ್ಧಿಯನ್ನು ಹೊಂದು. ನೀನು ಮಾಡುವ ಕೆಲಸದಿಂದ ಧನವೆಷ್ಟು ನಿನಗೆ ಪ್ರಾಪ್ತಿಯಾಗುತ್ತದೋ ಅದನ್ನು (ಆ ಸನ್ಮಾರ್ಗದಿಂದ ಸಂಪಾದಿಸಿದ ಸಂಪತ್ತಿನಿಂದ) ಅನುಭವಿಸಿ, ಉಪಭೋಗಿಸಿ ಮನಸ್ಸಿಗೆ ತೃಪ್ತಿಯನ್ನು ತಂದುಕೊಳ್ಳಬೇಕು. ಎಲೈ ಮೂಢನೇ! ಅತಿ ಆಸೆಯನ್ನು ಬಿಡು.

ಮೂಢ ಜಹೀಹಿ ಧನಾಗಮತೃಷ್ಣಾಮ್
ಕುರು ಸದ್ಬುದ್ಧಿಂ ಮನಸಿ ವಿತೃಷ್ಣಾಮ್ ।
ಯಲ್ಲಭಸೇ ನಿಜ ಕರ್ಮೋಪಾತ್ತಮ್
ವಿತ್ತಂ ತೇನ ವಿನೋದಯ ಚಿತ್ತಮ್ ॥ (ಭ. ಗೋ. ೨)

ತನಗೆ ಶ್ರೇಯಃಪ್ರಾಪ್ತಿಯಾಗಬೇಕೆಂಬ ಇಚ್ಛೆಯುಳ್ಳವನು ವೇದಾಧ್ಯಯನ ಸಂಪನ್ನರಾದ ಬ್ರಾಹ್ಮಣರಿಗೆ ತನ್ನ ವಿತ್ತಾನುಸಾರ (ತನ್ನ ಸಿರಿ-ಸಂಪತ್ತಿಗನುಗುಣವಾಗಿ) ದಾನ ಮಾಡಿದರೆ ಅದರ ಫಲವು ಅನಂತಗುಣದ್ದಾಗುತ್ತದೆ. ತಮ್ಮಲ್ಲಿ ಅಧಿಕ ಸಂಪತ್ತಿದ್ದರೆ ಅತ್ಯಲ್ಪ ದಾನ ಮಾಡುವುದು ಅಧಮವೆನ್ನುತ್ತಾರೆ.

ಆತ್ಮವಿತ್ತಾನುಸಾರೇಣ ತತ್ರ ದಾನಮನಂತಕಮ್ ।
ದೇಯಂ ವಿಪ್ರಾಯ ವಿದುಷೇ ಸ್ವಾತ್ಮನಃ ಶ್ರೇಯ ಇಚ್ಛತಾ ॥
(ಗ. ಪು. ೮-೯೧)

ದಾನವು ಸ್ವಲ್ಪವಾದರೂ ಆಗಬಹುದು. ಆದರೆ ತನ್ನ ಕೈಯಿಂದ (ತಾನೇ ಸ್ವತಃ) ಶ್ರದ್ಧೆ (ಭಕ್ತಿ)ಯಿಂದ ಮಾಡಿದರೆ ಅದು ಅಕ್ಷಯ(ಪುಣ್ಯಭಾಜನ)ವಾಗುತ್ತದೆ. ಅರ್ಥಾತ್ ಹಾಗೆ ದಾನ ಮಾಡಿದರೆ ಅದು ಜನ್ಮ-ಜನ್ಮಾಂತರದ ತನಕವೂ ಫಲವನ್ನು ಕೊಡುತ್ತದೆ.

ಅಲ್ಪೇನಾಪಿ ಹಿ ವಿತ್ತೇನ ಸ್ವಹಸ್ತೇನಾತ್ಮನೇ ಕೃತಮ್ ।
ತದಕ್ಷಯಂ ಭವೇದ್ದಾನಂ ತತ್ಕಾಲಂ ಚೋಪತಿಷ್ಠತಿ ॥ (ಗ. ಪು. ೮-೯೨)

ಈ ಮನುಷ್ಯಜನ್ಮವು ಮಹಾಪುಣ್ಯಪ್ರಭಾವದಿಂದ ದೊರಕಿರುತ್ತದೆ. ಇದು ದೊರಕಿರುವಾಗಲೇ ಧರ್ಮಾಚರಣೆ ಮಾಡಿದರೆ ಅವನು ಸದ್ಗತಿಯನ್ನು ಹೊಂದುತ್ತಾನೆ.

ಮಹಾಪುಣ್ಯಪ್ರಭಾವೇಣ ಮಾನುಷಂ ಜನ್ಮ ಲಭ್ಯತೇ ।
ಯಸ್ತತ್ಪ್ರಾಪ್ಯ ಚರೇದ್ಧರ್ಮಂ ಸ ಯಾತಿ ಪರಮಾಂ ಗತಿಮ್ ॥
(ಗ. ಪು. ೮-೯೩)

ಮನುಷ್ಯಜನ್ಮ ದೊರಕಿಯೂ ಧರ್ಮವನ್ನಾಚರಿಸದಿದ್ದರೆ, ಜನ್ಮ-ಜನ್ಮಾಂತರದಲ್ಲಿಯೂ ದುಃಖಪಡಬೇಕಾಗುತ್ತದೆ. ಆದ್ದರಿಂದ ಧರ್ಮಾಚರಣೆಯೇ ಮನುಷ್ಯಜನ್ಮದ ಸಫಲತೆ; ಬೇರಾವುದೂ ಅಲ್ಲ.

ಅವಿಜ್ಞಾಯ ನರೋ ಧರ್ಮಂ ದುಃಖಮಾಯಾತಿ ಯಾತಿ ಚ ।
ಮನುಷ್ಯಜನ್ಮಸಾಫಲ್ಯಂ ಕೇವಲಂ ಧರ್ಮಸೇವನಮ್ ॥ (ಗ. ಪು. ೮-೯೬)

ತಮ್ಮೊಂದಿಗೆ ಬರುವುದು ಧರ್ಮಮಾತ್ರ 'ವಿಮುಖಾ ಬಾಂಧವಾ ಯಾಂತಿ ಧರ್ಮಸ್ತಮನುಗಚ್ಛತಿ'. 'ಶುಭಾಶುಭಂ ಕೃತಂ ಕರ್ಮ ಗಚ್ಛಂತಮನುಗಚ್ಛತಿ'. ಸ್ಥೂಲಶರೀರವು ಅಗ್ನಿಯಲ್ಲಿ ಸುಟ್ಟುಹೋಗುತ್ತದೆ. ಆದರೆ ಈ ಶರೀರದಿಂದ ಮಾಡಿದ (ಶುಭಾಶುಭಕರ್ಮವು ಮಾತ್ರ) ಪುಣ್ಯ ಅಥವಾ ಪಾಪವು ಜೀವಾತ್ಮನೊಂದಿಗೆ ಇದ್ದು ಅದರ ಫಲವನ್ನು ಮಾತ್ರ ಭೋಗಿಸುತ್ತಾನೆ. '...ಕೃತಂ ಕರ್ಮ ಸಹಾಸ್ಥಿತಮ್। ಪುಣ್ಯಂ ವಾ ಯದಿ ವಾ ಪಾಪಂ ಭುಂಕ್ತೇ ಸರ್ವತ್ರ ಮಾನವಃ' (ಗ.ಪು. ೮-೧೦೩)

ಪೂರ್ವಜನ್ಮದಲ್ಲಿ ದಾನ ಮಾಡಿದ್ದರಿಂದಲೇ ಈ ಜನ್ಮದಲ್ಲಿ ಸಂಪತ್ತು (ಧನ) ದೊರಕಿರುತ್ತದೆ. ಈ ರೀತಿಯಾಗಿ ವಿವೇಕದಿಂದ ತಿಳಿದು ದಾನ ಮಾಡುವುದಕ್ಕೇ ಧನವು ಪ್ರಾಪ್ತವಾಗಿದೆ ಎಂದೂ ಗ್ರಹಿಸಬೇಕು.

ಪೂರ್ವಜನ್ಮಕೃತಾದ್ದಾನಾದತ್ರ ಲಬ್ಧಂ ಧನಂ ಬಹು ।
ತಸ್ಮಾದೇವಂ ಪರಿಜ್ಞಾಯ ಧರ್ಮಾರ್ಥಂ ದೀಯತಾಂ ಧನಮ್ ॥
(ಗ. ಪು. ೮-೧೦೮)

ಧರ್ಮ ಮಾಡುವುದರಿಂದಲೇ ಧನಪ್ರಾಪ್ತಿಯಾಗುತ್ತದೆ. ಹಾಗೂ ಧರ್ಮದಿಂದಲೇ ಕಾಮನೆ (ಇಷ್ಟಾರ್ಥ)ಗಳು ಸಿದ್ಧಿಸುತ್ತವೆ. ಧರ್ಮದಿಂದಲೇ ಮೋಕ್ಷಪ್ರಾಪ್ತಿ. ಆದ್ದರಿಂದ ಧರ್ಮಾಚರಣೆ ಮಾಡಬೇಕು.

ಧರ್ಮಾತ್ಸಂಜಾಯತೇಽರ್ಥಶ್ಚ ಧರ್ಮಾತ್ಕಾಮೋಽಭಿಜಾಯತೇ ।
ಧರ್ಮ ಏವಾಪವರ್ಗಾಯ ತಸ್ಮಾದ್ಧರ್ಮಂ ಸಮಾಚರೇತ್ ॥
(ಗ. ಪು. ೮-೧೦೯)

ಧರ್ಮವು ಶ್ರದ್ಧೆಯಿಂದಲೇ ಸಿದ್ಧಿಸುವುದು. ಶ್ರೀಮಂತಿಕೆ (ಅರ್ಥರಾಶಿಗಳಿಂದ, ಸಿರಿ-ಸಂಪತ್ತುಗಳಿಂದ)ಯಿಂದಲ್ಲ. ಯಾಕೆಂದರೆ ಪರಿಗ್ರಹರಹಿತರಾದ (ಅರ್ಥಕ್ಕೆ ಮಹತ್ತ್ವ ಕೊಡದ ಶ್ರೀಸಂಪತ್ತುರಹಿತರಾದ) ಋಷಿಗಳು ಕೇವಲ ಧರ್ಮಶ್ರದ್ಧೆಗಳಿಂದಲೇ ಸ್ವರ್ಗ(ಸದ್ಗತಿ)ವನ್ನು ಪಡೆದಿದ್ದಾರೆ.

ಶ್ರದ್ಧಯಾ ಧಾರ್ಯತೇ ಧರ್ಮೋ ಬಹುಭಿರ್ನಾರ್ಥರಾಶಿಭಿಃ ।
ನಿಷ್ಕಿಂಚನಾ ಹಿ ಮುನಯಃ ಶ್ರದ್ಧಾವಂತೋ ದಿವಂ ಗತಾಃ ॥
(ಗ. ಪು. ೮-೧೧೦)

ಶ್ರೀಮದ್ಭಗವದ್ಗೀತೆ, ಗರುಡಪುರಾಣದಲ್ಲಿ ಹಾಗೂ ಇನ್ನೂ ಬೇರೆ ಬೇರೆ ಕಡೆ ಪರಮಾತ್ಮನು ಹೇಳಿರುತ್ತಾನೆ. ಪತ್ರ-ಪುಷ್ಪ, ಫಲ, ಜಲಾದಿಗಳನ್ನು ಯಾರು ನನಗೆ ಭಕ್ತಿಯಿಂದ ಸಮರ್ಪಿಸುತ್ತಾರೋ ಅದನ್ನು ಅರ್ಥಾತ್ (ಶ್ರದ್ಧಾ) ಭಕ್ತಿಯಿಂದ ಅರ್ಪಿಸಿದ್ದನ್ನು ನಾನು ಸ್ವೀಕರಿಸುತ್ತೇನೆ.

ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।
ತದಹಂ ಭಕ್ತ್ಯುಸಹೃತಮಶ್ನಾಮಿ ಪ್ರಯತಾತ್ಮನಃ ॥ (ಭ.ಗೀ. ಮತ್ತು ಗ.ಪು.)

ಆ ಕಾರಣದಿಂದ ದಾನ ಮಾಡಲೇಬೇಕು. ಆವಾಗ ವಿಧಿಯುಕ್ತವಾಗಿ ದಾನ ಮಾಡಬೇಕು. ಅದು ಅಲ್ಪವೇ ಇರಲಿ. ಅಧಿಕವೇ ಇರಲಿ ಅದರ ವಿಚಾರ ಮಾಡದೇ ಶ್ರದ್ಧಾಭಕ್ತಿಯಿಂದ ವಿಧ್ಯುಕ್ತವಾಗಿ ದಾನ ಮಾಡಬೇಕು.

ತಸ್ಮಾದವಶ್ಯಂ ದಾತವ್ಯಂ ತದಾ ದಾನಂ ವಿಧಾನತಃ ।
ಅಲ್ಪಂ ವಾ ಬಹುವೇತೀಮಾಂ ಗಣನಾಂ ನೈವ ಕಾರಯೇತ್ ॥

(ಗ. ಪು. ೮-೧೧೨)

ಉಶೀನರ, ವಿಶ್ವಗಶ್ವ, ನೃಗ, ಭಗೀರಥ, ಸುಪ್ರಸಿದ್ಧ ಯೌವನಾಶ್ವ, ಮಾಂಧಾತ, ಮುಚುಕುಂದ, ರಾಜಾಭೂರಿದ್ಯುಮ್ನ, ನೈಷಧ, ಸೋಮಕ, ಪುರೂರವ, ಚಕ್ರವರ್ತೀ ಭರತ, ಇವನ ಎಲ್ಲ ವಂಶಸ್ಥರಾದ ಭರತರಾಜರು (ಭರತವಂಶಸ್ಥರು) ಧೀರ-ವೀರ-ಶೂರ ದಶರಥಸುಪುತ್ರ ಕೌಸಲ್ಯಾನಂದನ ಶ್ರೀರಾಮಚಂದ್ರ, ಇತರ ಕೀರ್ತಿ ಪ್ರಸಿದ್ಧಿ ಪಡೆದ ಮಹಾರಾಜರುಗಳು ಹಾಗೂ ದಿಲೀಪ ಮಹಾರಾಜ ಮೊದಲಾದವರು ವಿಧಿಗಳನ್ನು ತಿಳಿದು ಗೋದಾನ ಮಾಡಿದ್ದರಿಂದ ಸ್ವರ್ಗಲೋಕವನ್ನು ಹೊಂದಿದರು. ಯಜ್ಞ-ದಾನ-ತಪಸ್ಸುಗಳಿಂದ ಹಾಗೂ ರಾಜಧರ್ಮ ಮತ್ತು ಗೋದಾನಾದಿಗಳಿಂದ ಉತ್ತಮ ಲೋಕವನ್ನೂ ಪಡೆದರು.

ಉಶೀನರೋ ವಿಶ್ವಗಶ್ವೋ ನೃಗಶ್ಚ
ಭಗೀರಥೋ ವಿಶ್ರುತೋ ಯೌವನಾಶ್ವಃ ।
ಮಾಂಧಾತಾ ವೈ ಮುಚುಕುಂದಶ್ಚ ರಾಜಾ
ಭೂರಿದ್ಯುಮ್ನೋ ನೈಷಧಃ ಸೋಮಕಶ್ಚ ॥

ಪುರೂರವೋ ಭರತಶ್ಚಕ್ರವರ್ತೀ
ಯಸ್ಯಾನ್ವವಾಯೇ ಭರತಾಃ ಸರ್ವ ಏವ ।
ತಥಾ ವೀರೋ ದಾಶರಥಿಶ್ಚ ರಾಮೋ
ಯೇ ಚಾಪ್ಯನ್ಯೇ ವಿಶ್ರುತಾಃ ಕೀರ್ತಿಮಂತಃ ॥

ತಥಾ ರಾಜಾ ಪೃಥುಕರ್ಮಾ ದಿಲೀಪೋ
ದಿವಂ ಪ್ರಾಪ್ತೋ ಗೋಪ್ರದಾನೈರ್ವಿಧಿಜ್ಞಃ ।
ಯಜ್ಞೈಃ ದಾನೈಸ್ತಪಸಾ ರಾಜಧರ್ಮೈಃ
ಮಾಂಧಾತಾಽಭೂದ್ಗೋಪ್ರದಾನೈಶ್ಚ ಯುಕ್ತಃ ॥

(ಮ. ಭಾ. ಅ. ಪ. ೭೬ / ೨೫, ೨೬, ೨೭)

ಯಾವುದನ್ನು ಬಿಟ್ಟರೂ ಯಜ್ಞ-ದಾನ-ತಪಃಕರ್ಮಗಳನ್ನು ಬಿಡಬಾರದೆಂದು ಶ್ರೀಮದ್ಭಗವದ್ಗೀತೆಯಲ್ಲಿ ಶ್ರೀಕೃಷ್ಣಪರಮಾತ್ಮ ಆದೇಶಿಸಿರುತ್ತಾನೆ. 'ಯಜ್ಞ-ದಾನ-ತಪಃ ಕರ್ಮ ನ ಹಾತವ್ಯಂ ಕದಾಚನ'.

ತೈತ್ತಿರೀಯಾರಣ್ಯಕೋಪನಿಷತ್ತಿನಲ್ಲಿ ಗೋಹಿರಣ್ಯಾದಿದಾನವು ಯಜ್ಞಗಳಲ್ಲಿ ಶ್ರೇಷ್ಠವಾದ ದಕ್ಷಿಣೆಯೆಂದೂ ದಾತಾರನಿಂದ ಎಲ್ಲರೂ ಜೀವಿಸುತ್ತಾರೆಂದೂ ದಾನದಿಂದ ಶತ್ರುಗಳೂ ಮಿತ್ರರಾಗುತ್ತಾರೆಂದೂ ಹೇಳಿದೆ.

ದಾನಂ ಯಜ್ಞಾನಾಂ ವರೂಥಂ ದಕ್ಷಿಣಾಲೋಕೇ ದಾತಾರಗ್ಂ ಸರ್ವಭೂತಾನ್ಯುಪಜೀವಂತಿ ದಾನೇನಾರಾತೀರಪಾನುದಂತ ದಾನೇನ ದ್ವಿಷಂತೋ ಮಿತ್ರಾ ಭವಂತಿ ದಾನೇ ಸರ್ವಂ ಪ್ರತಿಷ್ಠಿತಂ ತಸ್ಮಾದ್ದಾನಂ ಪರಮಂ ವದಂತಿ (ತೈ. ಯ. ಆ. ಉ. ೪-೭೯)

ಬ್ರಾಹ್ಮಣರು, ಗೋವುಗಳು, ವೇದಗಳು, ತಪಸ್ಸು, ಸತ್ಯ, ಇಂದ್ರಿಯನಿಗ್ರಹ, ಮನೋನಿಗ್ರಹ, ಶ್ರದ್ಧೆ, ದಯೆ, ಸ್ಥೈರಣೆ, ಯಜ್ಞಾದಿಗಳು- ಇವು ಪರಮಾತ್ಮನ ಶರೀರವೆಂದು ಭಾಗವತದಲ್ಲಿ ಹೇಳಲಾಗಿದೆ.

ವಿಪ್ರಾ ಗಾವಶ್ಚ ವೇದಾಶ್ಚ ತಪಸ್ಸತ್ಯಂ ದಮಃ ಶಮಃ ।
ಶ್ರದ್ಧಾ ದಯಾ ತಿತಿಕ್ಷಾ ಚ ಕ್ರತವಶ್ಚ ಹರೇಸ್ತನುಃ ।

(ಶ್ರೀಭಾಗವತ ೧೦.೪.೪೨)

ಮಕ್ಕಳ ರಕ್ಷಣೆಗೆ ಅಥವಾ ದೃಷ್ಟಿದೋಷ, ಔಷಧಾದಿ ಮೂಲಿಕಾ ಪ್ರಯೋಗವಾದಲ್ಲಿ ಗೋಮೂತ್ರದಿಂದ ಸ್ನಾನಮಾಡಿಸಿ ಗೋಮಯಲೇಪನ ಹಾಗೂ ಪಂಚಗವ್ಯ ಪ್ರೋಕ್ಷಣೆ-ಪ್ರಾಶನ ಮತ್ತು ಗೋಪೂಜೆ-ಗೋದಾನಾದಿಗಳಿಂದ ದೋಷಪರಿಹಾರವಾಗುವುದು. ಶ್ರೀಕೃಷ್ಣನಿಗೆ ಗೋಪಿಕೆಯರು ಯಶೋದಾ ರೋಹಿಣಿಯರೊಡನೆ

ಆಕಳ ಬಾಲವನ್ನು ಇಳಿಯ ತೆಗೆಯುವುದೇ ಮೊದಲಾದ ರಕ್ಷೆಗಳನ್ನು ನಡೆಸಿದರು. ತದನಂತರ (ಕೇಶವಾದಿ ನಾಮಗಳನ್ನು ಜಪಿಸುತ್ತಾ) ಆ ಮಗುವಿನ ಲಲಾಟವೇ ಮೊದಲಾದ ದ್ವಾದಶಾಂಗಗಳನ್ನು ಮೊದಲು ಗೋಮೂತ್ರದಿಂದಲೂ, ತದನಂತರ ಗೋಧೂಳಿಯಿಂದಲೂ, ತರುವಾಯ ಗೋಮಯದಿಂದಲೂ ಸ್ನಾನಮಾಡಿಸಿ ರಕ್ಷೆಯನ್ನಿಟ್ಟರು. ಆ ಸ್ತ್ರೀಯರು ಮೊದಲು ಗಾಬರಿಯಿಂದ ಶುದ್ಧರಾಗದೇ ಲೋಕಾಚಾರ ರೂಪಗಳಾದ ರಕ್ಷಾತಂತ್ರಗಳನ್ನು ನಡೆಸಿ ಗಾಬರಿ ಹೋದ ಮೇಲೆ ಅಕ್ಕರೆಯಿಂದ ಶುದ್ಧರಾಗಿ ತಮ್ಮ ಅಂಗಗಳಲ್ಲಿಯೂ ಹಸ್ತಗಳಲ್ಲಿಯೂ ಬೀಜನ್ಯಾಸವನ್ನು ಮಾಡಿಕೊಂಡು ತದನಂತರ ಮಗುವಿನ (ಶ್ರೀಕೃಷ್ಣನ) ಅಂಗಗಳಲ್ಲಿಯೂ ಬೀಜನ್ಯಾಸ ಮಾಡಿದರು. 'ಯಶೋದಾ ರೋಹಿಣೀಭ್ಯಾಂ... ಗೋಪುಚ್ಛ ಭ್ರಮಣಾದಿಭಿಃ'

ಗೋಮೂತ್ರೇಣ ಸ್ನಾಪಯಿತ್ವಾ ಪುನರ್ಗೋ ರಜಸಾರ್ಭಕಮ್ ।
ರಕ್ಷಾಂ ಚಕ್ರುರ್ಗೋಶಕೃತಾ ದ್ವಾದಶಾಂಗೇಷು ನಾಮಭಿಃ ॥
ಗೋಪ್ಯಸ್ಸಂಸ್ಪೃಷ್ಟಸಲಿಲಾ... ಅಕುರ್ವತ ॥

(ಶ್ರೀ. ಭಾ. ಮ. ಪು. ೧೦ಸ್ಕ. ೬ಅ. ೧೯, ೨೦, ೨೧)

ಬ್ರಹ್ಮಪುರಾಣದಲ್ಲಿ– ಕಪ್ಪು (ವರ್ಣ) ಬಣ್ಣದ ಗೋದಾನದಿಂದ ಸ್ವರ್ಗಪ್ರಾಪ್ತಿ; ಬಿಳಿಗೋದಾನ–ಕುಲವೃದ್ಧಿ. ಕೆಂಪು (ಕಂದು) ಬಣ್ಣದ ಗೋದಾನ– ಸುಂದರ ರೂಪಪ್ರಾಪ್ತಿ; ಅರಸಿನ ಬಣ್ಣದ ಗೋದಾನ– ದುಃಖ ದಾರಿದ್ರ್ಯ ನಾಶ; ಕೃಷ್ಣಸಾರಾ (ಕಪ್ಪು–ಬಿಳಿ ಮಿಶ್ರ) ಗೋದಾನ–ಪುತ್ರಪ್ರಾಪ್ತಿ; ನೀಲಬಣ್ಣದ ಗೋದಾನ–ಧರ್ಮವೃದ್ಧಿ; ಕಪಿಲಾಗೋದಾನದಿಂದ ಸಕಲಪಾಪ ನಿವಾರಣೆ ಮತ್ತು ಬಣ್ಣ–ಬಣ್ಣದ ಗೋದಾನ ದಿಂದ ಮೋಕ್ಷಪ್ರಾಪ್ತವಾಗುವುದು ಎಂದು ಹೇಳಿದೆ.

ಕೃಷ್ಣಾ ಸ್ವರ್ಗಪ್ರದಾ ಜ್ಞೇಯಾ ಗೌರೀ ಚ ಕುಲವರ್ಧಿನೀ ।
ರಕ್ತಾ ರೂಪಪ್ರದಾ ಜ್ಞೇಯಾ ಪೀತಾ ದಾರಿದ್ರ್ಯಘಾತಿನೀ ॥

ಪುತ್ರಪ್ರದಾ ಕೃಷ್ಣಸಾರಾ ನೀಲಾ ಧರ್ಮವಿವರ್ಧಿನೀ ।
ಕಪಿಲಾ ಸರ್ವಪಾಪಘ್ನೀ ನಾನಾವರ್ಣಾ ಚ ಮೋಕ್ಷದಾ ॥

ಇದಲ್ಲದೆ ಪದ್ಮಪುರಾಣದ ಸೃಷ್ಟಿ ಮತ್ತು ಪಾತಾಲಖಂಡ, ಸ್ಕಂದಪುರಾಣ, ವೇದಗಳಲ್ಲಿ, ಮನುಸ್ಮೃತಿ, ಯಾಜ್ಞವಲ್ಕ್ಯ ಸ್ಮೃತಿ, ಕಾತ್ಯಾಯನ, ಗೋಭಿಲ, ವ್ಯಾಸ, ಶಾತಾತಪ, ಬೃಹಸ್ಪತಿ, ವಸಿಷ್ಠಾದಿ ಸ್ಮೃತಿಗಳಲ್ಲಿಯೂ ಗೋದಾನಾದಿಗಳ ವಿಷಯ ಹಾಗೂ ಯಾರು–ಯಾರಿಗೆ–ಯಾವಾಗ–ಹೇಗೆ ದಾನ ಮಾಡಬೇಕು, ಯಾರಿಗೆ ದಾನ ಮಾಡಬಾರದು, ಯಾರಿಗೆ ದಾನ ಮಾಡಿದರೆ ಏನೇನು ಫಲಗಳು ಇತ್ಯಾದಿ ಅನೇಕ ವಿಚಾರಗಳನ್ನೂ ಶಾಸ್ತ್ರವಚನಗಳನ್ನೂ ನಾವು ನೋಡಬಹುದು.

ಈ ಗ್ರಂಥದಲ್ಲಿ ಅರುಣನಮಸ್ಕಾರ ಮಹತ್ತ್ವ ಮತ್ತು ಅರುಣಪೂಜೆಗಳನ್ನು ಸೇರಿಸಿದೆ. ಕೆಲವೆಡೆ ವಾರ್ಷಿಕವಾಗಿ ನೆರವೇರಿಸುವ ಕುಲದೇವತಾಪೂಜೆ ಹಾಗೂ ಬ್ರಾಹ್ಮಣಾರ್ಚನಪೂರ್ವಕ ಅನ್ನದಾನಾದಿಗಳ ವಿಧಿವಿಧಾನಗಳನ್ನೂ ಶಿಷ್ಟಾಚಾರ ಪ್ರಾಪ್ತ ರೀತಿಯಿಂದ ಸಂಕಲಿಸಲಾಗಿದೆ. ಸಂಕಲ್ಪಾದಿಗಳನ್ನು 'ಸಂಕಲ್ಪಕಲ್ಪಃ' ಎಂಬ ನಾಮಧೇಯದ ಶೀರ್ಷಿಕೆಯಡಿಯಲ್ಲಿ ಹಾಕಲಾಗಿದೆ. ಈ ಗ್ರಂಥಕ್ಕೆ ಸಹಕರಿಸಿದ ಎಲ್ಲರಿಗೂ ಕೃತಜ್ಞತೆಯನ್ನು ಸಮರ್ಪಿಸುತ್ತೇನೆ.

ಸಮಸ್ತವಿದ್ವಜ್ಜನರಿಗೂ ಪುನಃ ಪುನಃ ನಮಸ್ಕರಿಸುತ್ತಾ 'ಸಮಸ್ತಸನ್ಮಂಗಲಾನಿ ಭವಂತು'.

॥ ಇತಿ ಶಮ್ ॥

**ವೇ। ಬ್ರ ಮಿತ್ತೂರು ಪುರೋಹಿತ ಶ್ರೀನಿವಾಸ ಭಟ್ಟ**, ಎಂ.ಎ.

ಜ್ಯೋತಿಷ ಶಿರೋಮಣಿ
ಶ್ರೀಶರಾಮನಿವಾಸ, ಅಂಚೆ : ಅನಂತಾಡಿ
ಬಂಟ್ವಾಳ ತಾಲೂಕು, ದ. ಕ., ೫೭೪ ೨೫೩
ಚರದೂರವಾಣಿ : ೦೯೪೪೯೯೩೬೮೪೨

ಹೇಮಲಂಬಿ ನಾಮ ಸಂ।
ಆಷಾಢ ಕೃ। ದ್ವಾದಶಿ
ರೋಹಿಣಿ ನಕ್ಷತ್ರ
೨೦-೭-೨೦೧೭

# ಅನುಕ್ರಮಣಿಕೆ

## ಸಂಕಲ್ಪಕಲ್ಪಃ







॥ ಓಂ ಶ್ರೀಗುರುಭ್ಯೋ ನಮಃ ॥ ॥ ಓಂ ಶ್ರೀಗಣಪತಯೇ ನಮಃ ॥

॥ ಓಂ ಶ್ರೀಸರಸ್ವತ್ಯೈ ನಮಃ ॥

# ಗೋಃಪ್ರದಾನಪ್ರಯೋಗಃ

**(ಯಥಾಶಕ್ತ್ಯಲಂಕೃತ)**

ಆಚಮ್ಯ, ಪವಿತ್ರಪಾಣಿಃ, ಪ್ರಾಣಾನಾಯಮ್ಯ, ಗುರ್ವಾದೀನ್ನಮಸ್ಕೃತ್ಯ ಜಲಶುದ್ಧಿಂ ಕೃತ್ವಾ, ಸಂಕಲ್ಪಯೇತ್ ।

ಸಕುಶಾಕ್ಷತ ಜಲಹಸ್ತಃ–

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ॥

...ಶುಭತಿಥೌ[೧]... ಅಸ್ಮಾಕಂ ಸಹಕುಟುಂಬಾನಾಂ ಕ್ಷೇಮ–ಸ್ಥೈರ್ಯ–ಧೈರ್ಯ–ವೀರ್ಯ–ವಿಜಯ–ಆಯುರಾರೋಗ್ಯೈಶ್ವರ್ಯಾಭಿವೃದ್ಧ್ಯರ್ಥಂ ಧರ್ಮಾರ್ಥ ಕಾಮಮೋಕ್ಷಾಖ್ಯ ಚತುರ್ವಿಧಫಲಪುರುಷಾರ್ಥಸಿದ್ಧ್ಯರ್ಥಂ ಆದಿತ್ಯಾದೀನಾಂ

---

೧. ಗತಿಸಿದವರ ನಿಮಿತ್ತ ಗೋದಾನ ಮಾಡುವಾಗ ಈ ರೀತಿಯ ಸಂಕಲ್ಪವನ್ನು ಹೇಳುವ ಸಂಪ್ರದಾಯವಿದೆ– ...ಶುಭತಿಥೌ ಮಮ (ಪಿತುಃ ವಾ ಮಾತುಃ) ನಿಖಿಲದುರಿತ ದೌರ್ಭಾಗ್ಯದುಃಸ್ವಪ್ನ ದುರ್ನಿಮಿತ್ತಬಾಧಾಶಾಂತಿಪೂರ್ವಕಂ ನಾಂದೀಮುಖಾಶ್ರುಮುಖ ಕವ್ಯೋಷ್ಣಪಾದಿ ಸಮಸ್ತಪಿತೃಪ್ರೀತ್ಯರ್ಥಂ ಊಷ್ಮಪೋ ಯಮೋಂಗಿರಸ್ವಾನಗ್ನಿಷ್ವಾತ್ತೋಗ್ನಿಃ ಕವ್ಯವಾಹನಾದಯೋ ಯೇ ಪಿತರಸ್ತೇಷಾಮವಿಚ್ಛಿನ್ನಪ್ರಸಾದಸಿದ್ಧ್ಯರ್ಥಂ ಅಸೃಗ್ಭಾಗಿ–ಲೇಪಭಾಗಿ–ಪಿಂಡಭಾಗಿ–ವಿಪ್ರೋಚ್ಛಿಷ್ಟಭಾಗಿ–ಪ್ರಭೃತೀನಾಮಕ್ಷಯ್ಯತೃಪ್ತ್ಯರ್ಥಂ ಯೇ ಸುಕಾಲಪಿತರಃ, ಯೇ ವಾ ಅಂಗಿರಸಪಿತರಃ, ಯೇ ಸುಸ್ವಧಪಿತರಃ ಯೇ ಸೋಮಪಪಿತರ ಇತಿ; ತತ್ತೇಷಾಂ ಮೂರ್ತಿಮತ್ಪಿತೄಣಾಂ ಕ್ಷಿಪ್ರಪ್ರಸಾದಸಿದ್ಧ್ಯರ್ಥಂ ಯೇ ಅಗ್ನಿಷ್ವಾತ್ತ ಪಿತರಃ, ಯೇ ಬರ್ಹಿಷದ ಪಿತರ ಇತಿ, ತತ್ತೇಷಾಮಮೂರ್ತಾನಾಂ ಕಾಮರೂಪಾಣಾಂ ವೈರಾಜಪಿತೄಣಾಂ ಪೂರ್ಣಾನುಗ್ರಹಪ್ರಾಪ್ತ್ಯರ್ಥಂ ಅಸ್ಮತ್ಪಿತೃ ಮಾತೃವಂಶಜಾನಾಂ ದಿವಿ ಭುವಿ ತಿರ್ಯಙ್ನರಕಾದಿಷು ವಾಸಿನಾಂ ಉತ್ತಮಲೋಕಾವಾಪ್ತ್ಯರ್ಥಂ ಸಮಸ್ತ ಪೂರ್ವಜೋದ್ಧಾರಾರ್ಥಂ ದೋಗ್ಧ್ರೀ– ಸವತ್ಸಾ– ಅವ್ಯಂಗಾ– ಅಕ್ಲೀಬಾ– ದೋಷ ವಿವರ್ಜಿತಾ ಇತಿ ಯಥಾವಿಹಿತ ಗುಣವಿಶಿಷ್ಟಾಯಾಃ ಯಥಾಸಂಭವಾಲಂಕಾರೈರ ಲಂಕೃತಾಯಾಃ ಅಸ್ಯಾಃ ಗೋಃ ಪ್ರದಾನಂ ಕರಿಷ್ಯೇ ॥ ಮೇಲಿನ ಸಂಕಲ್ಪವಾಕ್ಯದ 'ಗಂಗಾವಾಲುಕಾಭಿಃ' ಇಲ್ಲಿಂದ 'ಶ್ರೀಮಹಾವಿಷ್ಣೋಃಸಾಯುಜ್ಯಪ್ರಾಪ್ತ್ಯರ್ಥಂ' ತನಕ ಇಲ್ಲಿಗೆ ಸೇರಿಸಿಕೊಳ್ಳಿರಿ.

ನವಾನಾಂ ಗ್ರಹಾಣಾಂ ಶುಭೈಕಾದಶಸ್ಥಾನಫಲಾವಾಪ್ತ್ಯರ್ಥಂ ಮಮ ಇಹಜನ್ಮನಿ-ಜನ್ಮ-ಜನ್ಮಾಂತರೇಷು ವಾ ಕಾಯಿಕ-ವಾಚಿಕ-ಮಾನಸಿಕೈಃ-ಬ್ರಹ್ಮಹತ್ಯಾ ಭ್ರೂಣಹತ್ಯಾ-ಗೋವಧ-ಸುರಾಪಾನ-ಗುರುತಲ್ಪಗಮನ ಸ್ತ್ರೀಹತ್ಯಾ-ಮಹಿಷೀವಧ-ಉದ್ಭಿಜ-ಸ್ವೇದಜ-ಅಂಡಜ-ಜರಾಯುಜ ಇತಿ ಚತುರ್ವಿಧಸೃಷ್ಟಿಷು ಅನ್ಯತಮವಧದೋಷ ಪರಿಹಾರಾರ್ಥಂ ಪುತ್ರ-ಪೌತ್ರಾದಿ ಅನವಚ್ಛಿನ್ನ ಸಂತತಿಪರಂಪರಾಭಿವೃದ್ಧ್ಯರ್ಥಂ ಗೃಹಕಲಹ-ಬಂಧುಕಲಹ-ಜ್ಞಾತಿಜನವೈರ-ಸ್ವಜನವಿರೋಧಾದಿದೋಷ ನಿವೃತ್ತ್ಯರ್ಥಂ ಗೋಷು ಯಾವದ್ರೋಮಾಣಿ ಸಂತಿ ತಾವದ್ವರ್ಷಸಹಸ್ರಪರ್ಯಂತಂ ಸ್ವರ್ಗಲೋಕೇ ನಿವಾಸಸಿದ್ಧ್ಯರ್ಥಂ ಗೋಷು ಯಾವದ್ದೇವತಾಸ್ತಾವದ್ದೇವತಾನಾಂ ಪರಮಾನುಗ್ರಹಪ್ರಾಪ್ತ್ಯರ್ಥಂ ಗೋದಾನಕರ್ಮಣಃ ಕಲ್ಪೋಕ್ತಫಲಾವಾಪ್ತ್ಯರ್ಥಂ ಗೋದಾನಾತ್ ಸರ್ವಕ್ರತುಫಲಾವಾಪ್ತ್ಯರ್ಥಂ (ಆಯುರಾರೋಗ್ಯ-ಧನ-ಧಾನ್ಯ ಸಂಪದಭಿವೃದ್ಧ್ಯರ್ಥಂ) ದೇಹಾಂತೇ ಗೋರೋಮಸಂಖ್ಯಾಕವತ್ಸರಾವಧಿ ಸಕಲ ಭೋಗಪರಿಪೂರ್ಣಸ್ವರ್ಗಲೋಕಾವಾಪ್ತ್ಯರ್ಥಂ ತ್ರಿಗುಣೀಕೃತಾಗ್ನಿಷ್ಟೋಮಾತಿ ರಾತ್ರಾಪ್ತೋರ್ಯಾಮ-ವಾಜಪೇಯ-ಪೌಂಡರೀಕ- ರಾಜಸೂಯಾಶ್ವಮೇಧಾದಿ ನಿಖಿಲಕ್ರತುಶತಫಲಾವಾಪ್ತ್ಯರ್ಥಂ ದಶಪೂರ್ವೇಷಾಂ ದಶಾಪರೇಷಾಂ ಮದ್ವಂಶ್ಯಾನಾಂ ಮಮ ಚ ಸಕುಟುಂಬಸ್ಯ ಸಪರಿವಾರಸ್ಯ ದೇಹಾಂತೇ ನರಕಾದುತ್ತೀರ್ಯ ಶಾಶ್ವತಬ್ರಹ್ಮಲೋಕಾವಾಪ್ತ್ಯರ್ಥಂ ಗಂಗಾವಾಲುಕಾಭಿಃ ಕೃತರಾಶೇರ್ವರ್ಷಸಹಸ್ರಾವಸಾನೇ ಏಕೈಕವಾಲುಕಾಪಕರ್ಷಕ್ರಮೇಣ ಸರ್ವರಾಶ್ಯಪಕರ್ಷಸಮ್ಮಿತಕಾಲೇ ಬ್ರಹ್ಮಲೋಕೇ ನಿವಾಸಸಿದ್ಧ್ಯರ್ಥಂ ತಿಲೈಃ ಸೂರ್ಯಮಂಡಲಪರ್ಯಂತಂ ಕೃತರಾಶೇರ್ವರ್ಷಸಹಸ್ರಾವಸಾನೇ ಏಕೈಕ ತಿಲಾಪಕರ್ಷಕ್ರಮೇಣ ಸರ್ವರಾಶ್ಯಪಕರ್ಷಸಮ್ಮಿತಕಾಲೇ ಬ್ರಹ್ಮಲೋಕೇ ನಿವಾಸ ಸಿದ್ಧ್ಯರ್ಥಂ ಯವೈಶ್ಚಂದ್ರಮಂಡಲಪರ್ಯಂತಂ ಕೃತರಾಶೇರ್ವರ್ಷಸಹಸ್ರಾವಸಾನೇ ಏಕೈಕ ಯವಾಪಕರ್ಷಕ್ರಮೇಣ ಸರ್ವರಾಶ್ಯಪಕರ್ಷಸಮ್ಮಿತಕಾಲೇ ಬ್ರಹ್ಮಲೋಕೇ ನಿವಾಸಸಿದ್ಧ್ಯರ್ಥಂ ಕೃತ್ತಗೋಲೋಮಭಿಃ ಸಪ್ತರ್ಷಿಮಂಡಲಪರ್ಯಂತಂ ಕೃತರಾಶೇರ್ವರ್ಷಸಹಸ್ರಾವಸಾನೇ ಏಕೈಕಗೋಲೋಮಾಪಕರ್ಷಕ್ರಮೇಣ ಸರ್ವರಾಶ್ಯಪಕರ್ಷಸಮ್ಮಿತಕಾಲೇ ಬ್ರಹ್ಮಲೋಕೇ ನಿವಾಸಸಿದ್ಧ್ಯರ್ಥಂ ಗೋಧೂಮೈರ್ನಕ್ಷತ್ರಮಂಡಲಪರ್ಯಂತಂ ಕೃತರಾಶೇರ್ವರ್ಷಸಹಸ್ರಾವಸಾನೇ ಏಕೈಕ ದಿವ್ಯವರ್ಷಸ್ಯೈಕೈಕ ಗೋಧೂಮಾಪಕರ್ಷಕ್ರಮೇಣ ಸರ್ವರಾಶ್ಯಪಕರ್ಷ ಸಮ್ಮಿತಕಾಲೇ ಬ್ರಹ್ಮಲೋಕೇ ನಿವಾಸಸಿದ್ಧ್ಯರ್ಥಂ ಮಾಷೈರ್ಧ್ರುವಮಂಡಲ ಪರ್ಯಂತಂ ಕೃತರಾಶೇರ್ವರ್ಷಸಹಸ್ರಾವಸಾನೇ ಏಕೈಕದಿವ್ಯವರ್ಷಸ್ಯೈಕೈಕ ಮಾಷಾಪಕರ್ಷಕ್ರಮೇಣ ಸರ್ವರಾಶ್ಯಪಕರ್ಷಸಮ್ಮಿತಕಾಲೇ ಬ್ರಹ್ಮಲೋಕೇ ನಿವಾಸ ಸಿದ್ಧ್ಯರ್ಥಂ ಆಧಾರಶಕ್ತ್ಯಾದಿ

ಶಿಂಶುಮಾರಚಕ್ರಪರ್ಯಂತಂ ಪಂಚಾಶತ್ಕೋಟಿ ಯೋಜನವಿಸ್ತೀರ್ಣಭೂಮಂಡಲಕೃತ ಗಂಗಾವಾಲುಕರಾಶೌ ಏಕೈಕದಿವ್ಯವರ್ಷಸ್ಯೈಕೈಕ ವಾಲುಕಾಪಕರ್ಷಕ್ರಮೇಣ ಯಾವದ್ರಾಶಿಪರಿಸಮಾಪ್ತಿಸ್ತಾವತ್ಕಾಲಪರ್ಯಂತಂ ಶ್ರೀಮಹಾವಿಷ್ಣೋಃ ಸಾಯುಜ್ಯ ಪ್ರಾಪ್ತ್ಯರ್ಥಂ ದೋಗ್ಧ್ರೀ–ಸವತ್ಸಾ–ಅವ್ಯಂಗಾ– ಅಕ್ಲೀಬಾ–ದೋಷವಿವರ್ಜಿತಾ ಇತಿ ಯಥಾವಿಹಿತಗುಣವಿಶಿಷ್ಟಾಯಾಃ ಯಥಾಸಂಭವಾಲಂಕಾರೈರಲಂಕೃತಾಯಾಃ ಅಸ್ಯಾಃ ಗೋಃ ಪ್ರದಾನಂ ಕರಿಷ್ಯೇ ॥

ತದಂಗಗಣಪತಿಸ್ಮರಣಂ ಕರಿಷ್ಯೇ । ಇತಿ ತತ್ಕೃತ್ವಾ–

ಅಥ ಪ್ರತಿಗೃಹೀತುರ್ವರಣಮ್ । ಯಥಾ–

ಪೂಗೀಫಲ–ತಾಂಬೂಲ–ಗಂಧವಸ್ತ್ರ–ಕುಂಕುಮ–ಕುಸುಮಾಕ್ಷತಾನ್ ಗೃಹೀತ್ವಾ (ಅಮುಕ) ಗೋತ್ರಂ ತೈತ್ತಿರೀಯ ಯಜುಶ್ಶಾಖಾಧ್ಯಾಯಿನಂ (ಅಮುಕ) ಶರ್ಮಾಣಂ ಗೋಃ ಪ್ರತಿಗೃಹೀತಾರಂ ತ್ವಾಮಹಂ ವೃಣೇ ।

ವೇದಶಾಸ್ತ್ರಪುರಾಣಜ್ಞ! ವಿಷ್ಣುರೂಪ ದ್ವಿಜೋತ್ತಮ ।
ಧೇನೋಃ ಪ್ರತಿಗ್ರಹೇ ಪ್ರೀತ್ಯಾ ವೃಣೇ ತ್ವಾಂ ಬ್ರಹ್ಮವಿತ್ತಮಮ್ ॥

ಇತಿ ವರಣಸಾಮಗ್ರೀಂ ಬ್ರಾಹ್ಮಣಹಸ್ತೇ ದದ್ಯಾತ್ ।

**ಅಥ ಬ್ರಾಹ್ಮಣಾರ್ಚನಮ್** । ಯಥಾ–

ತವ ಪಾದೋದಕಂ ತೀರ್ಥಂ ಮುಖೇ ವೇದಾಃ ಪ್ರತಿಷ್ಠಿತಾಃ ।
ಪಾದ್ಯಂ ಗೃಹಾಣ ವಿಪ್ರೇಂದ್ರ ಭೂಮಿದೇವ ನಮೋಽಸ್ತು ತೇ ॥

ವಿಪ್ರೋತ್ತಮಾಯ ನಮಃ । ಪಾದ್ಯಂ ಸಮರ್ಪಯಾಮಿ ॥

ಅಥ ಅರ್ಘ್ಯಂ ಯಥಾ–

ಭೂಮಿದೇವಾಗ್ರಜನ್ಮಾಸಿ ತ್ವಂ ವಿಪ್ರ ಪುರುಷೋತ್ತಮ ।
ಪ್ರತ್ಯಕ್ಷಯಜ್ಞಪುರುಷ ಅರ್ಘ್ಯೋಽಯಂ ಪ್ರತಿಗೃಹ್ಯತಾಮ್ ॥

ವಿಷ್ಣುಸ್ವರೂಪಿಣೇ ವಿಪ್ರೋತ್ತಮಾಯ ನಮಃ । ಅರ್ಘ್ಯಂ ಸಮರ್ಪಯಾಮಿ ॥

ಅಥಾಚಮನೀಯಂ ಯಥಾ–

ಭವದ್ದರ್ಶನಮಾತ್ರೇಣ ಮುಕ್ತೋಽಸ್ಮಿ ಭವಬಂಧನಾತ್ ।
ಭಗವನ್! ಸರ್ವವೇದಜ್ಞ! ಗೃಹಾಣಾಚಮನೀಯಕಮ್ ॥

ವೇದಜ್ಞಾಯ ನಮಃ । ಆಚಮನೀಯಂ ಸಮರ್ಪಯಾಮಿ ॥

ಅಥ ವಸ್ತ್ರಂ ಯಥಾ–

ಯಜನಂ ಯಾಜನಂ ಚೈವಾಧ್ಯಯನಾಧ್ಯಾಪನಂ ತಥಾ ।
ದಾನಂ ಪ್ರತಿಗ್ರಹೋ ಹೋಮಃ ಷಟ್ಕರ್ಮನಿರತೋ ದ್ವಿಜಃ ॥

ಷಟ್ಕರ್ಮನಿರತಾಯ ನಮಃ । ವಸ್ತ್ರಂ ಸಮರ್ಪಯಾಮಿ ॥

ಅಥ ಉಪವೀತಂ ಯಥಾ–

ತವ ದೇಹೇ ಸ್ಥಿತಾ ವೇದಾಃ ಪಾವಯಂತಿ ಜಗತ್ತ್ರಯಮ್ ।
ಬ್ರಹ್ಮನ್ ಯಜ್ಞೇಷು ವಿಖ್ಯಾತ ಯಜ್ಞಸೂತ್ರಂ ಗೃಹಾಣ ಮೇ ॥

ಯಜ್ಞವಿಖ್ಯಾತಾಯ ನಮಃ । ಉಪವೀತಯುಗ್ಮಂ ಸಮರ್ಪಯಾಮಿ ॥

ಅಥ ಗಂಧಪ್ರದಾನಂ ಯಥಾ–

ಗಂಧಾನುಲಿಪ್ತಸರ್ವಾಂಗ ತಪಸಾ ವೀತಕಲ್ಮಷ ।
ಗಂಧಂ ಸ್ವೀಕುರು ವಿಪ್ರೇಂದ್ರ ತ್ರೈಲೋಕ್ಯಂ ಗಂಧಿತಂ ಕುರು ॥

ಗಂಧಾನುಲಿಪ್ತಸರ್ವಾಂಗಾಯ ನಮಃ । ಗಂಧಂ ಸಮರ್ಪಯಾಮಿ ॥

ಅಥ ಅಲಂಕಾರದಾನಂ ಯಥಾ–

ಕ್ಷಮಾ ತಪೋ ದಯಾ ದಾನಂ ಸತ್ಯಂ ಶೌಚಂ ಚ ಸಂಯಮಃ ।
ವಿದ್ಯಾ ಚ ವಿನಯಶ್ಚೈವ ತ್ವಯಿ ಭೂಷಣಮುತ್ತಮಮ್ ॥

ಬಹುಶ್ರುತಾಯ ನಮಃ । ಅಲಂಕಾರಾನ್ ಸಮರ್ಪಯಾಮಿ ॥

ಅಥ ಪುಷ್ಪಮಾಲಿಕಾದಾನಂ ಯಥಾ–

ಬ್ರಾಹ್ಮಣಾಃ ಸರ್ವವರ್ಣಾನಾಂ ಪಾವನಾ ಬ್ರಹ್ಮರೂಪಿಣಃ ।
ಪುಷ್ಪಮಾಲಾಂ ಮಯಾ ದತ್ತಾಂ ಗೃಹಾಣ ದ್ವಿಜಪುಂಗವ ॥

ಬ್ರಹ್ಮರೂಪಿಣೇ ದ್ವಿಜಪುಂಗವಾಯ ನಮಃ । ಪುಷ್ಪಮಾಲಾಂ ಸಮರ್ಪಯಾಮಿ ॥

ಅಥ ಧೂಪೋ ಯಥಾ–

ವನಸ್ಪತಿರಸೋತ್ಪನ್ನೋ ಗಂಧಾಢ್ಯೋ ಧೂಪ ಉತ್ತಮಃ ।
ಆಘ್ರೇಯಃ ಸರ್ವದೇವಾನಾಂ ಧೂಪೋಽಯಂ ಪ್ರತಿಗೃಹ್ಯತಾಮ್ ॥

ದ್ವಿಜೋತ್ತಮಾಯ ನಮಃ । ಧೂಪಮಾಘ್ರಾಪಯಾಮಿ ॥

ಅಥ ದೀಪಃ ಯಥಾ–

ಓಂ ಉದ್ದೀಪ್ಯಸ್ವ... ದಿಶ । ಇತಿ ದೀಪಂ ದದ್ಯಾತ್ ॥

ವೇದಪಾರಗಾಯ ನಮಃ । ದೀಪಂ ದರ್ಶಯಾಮಿ ॥

ಇದಂ ತೇ ಪುನರರ್ಘ್ಯಮ್ ॥

ಪಾದಪೂಜಾದಿ ಅಷ್ಟಾರ್ಘ್ಯಾಂತಂ ಕೃತ್ವಾ ।

ಆಮಭೋಜನದಾನಮ್ ॥

ಓಂ ಭೂರ್ಭುವಸ್ಸುವಃ... ॥ ಪ್ರೋಕ್ಷ್ಯ–

ಜೀವನಂ ಸರ್ವಭೂತಾನಾಂ ಮಂಗಲಾನಾಂ ಚ ಮಂಗಲಮ್ ।
ತುಷ್ಟಿದಂ ಸರ್ವದೇವಾನಾಂ ತಂಡುಲಂ ಪ್ರತಿಗೃಹ್ಯತಾಮ್ ॥

ಹಿರಣ್ಯಗರ್ಭಗರ್ಭಸ್ಥಂ... ಇದಮಾಮಂ ಭೋಜನಪರ್ಯಾಪ್ತಂ ಯಥಾಶಕ್ತಿ ದಕ್ಷಿಣಾ ತಾಂಬೂಲಸಹಿತಂ ತುಭ್ಯಮಹಂ ಸಂಪ್ರದದೇ ಶ್ರಿಯೈ ನ ಮಮ । ಓಂ ತತ್ಸತ್ ॥

ತದಮೃತರೂಪೇಣ ಸಂಪದ್ಯತಾಂ ಇತಿ ಪ್ರತಿವಚನಮ್ ।

ಅಥ ಪ್ರಾರ್ಥಯೇತ್–

ಯದರ್ಚನಂ ಕೃತಂ ವಿಪ್ರ ತವ ಬ್ರಹ್ಮ (ವಿಷ್ಣು) ಸ್ವರೂಪಿಣಃ ।
ತತ್ಸರ್ವಂ ಮಮ ದಾನಸ್ಯ (ಬ್ರಹ್ಮಣೇಽಸ್ತು) ವಿಷ್ಣವೇಽಸ್ತು ಸಮರ್ಪಣಮ್ ॥

ಇತಿ ಪ್ರಾರ್ಥ್ಯ ॥

## ಅಥ ಗೋಪೂಜಾ

ಕರದ್ವಯಂ ಸಂಪುಟೀಕೃತ್ಯ ಗವಿ ದೇವತಾಭಾವನಂ ಕುರ್ಯಾತ್ ।

ಯಥಾ–

ಆದಿತ್ಯದುಹಿತಾ ಗೌರ್ಹಿ ಸಾಕ್ಷಾತ್ ಪೃಥ್ವೀ ಪ್ರಕೀರ್ತಿತಾ ।
ಶ್ರೇಯೋರ್ಥೇ ಸರ್ವವರ್ಣಾನಾಮುತ್ಪನ್ನಾ ಕ್ರತುಸಿದ್ಧಯೇ ॥

ಬ್ರಾಹ್ಮಣಾಃ ಪಶವಶ್ಚೈವ ಕುಲಮೇಕಂ ದ್ವಿಧಾ ಕೃತಮ್ ।
ಏಕತ್ರ ಮಂತ್ರಾಸ್ತಿಷ್ಠಂತಿ ಹವಿರೇಕತ್ರ ತಿಷ್ಠತಿ ॥[೨]

೨. ಭವಿಷ್ಯತ್ಪುರಾಣೇ ಬ್ರಹ್ಮೋವಾಚ– ಆದಿತ್ಯದುಹಿತಾ... ಪಯೋಧರಾಃ ॥

ಗೋಭ್ಯೋ ಯಜ್ಞಾಃ ಪ್ರವರ್ತಂತೇ ಗೋಭ್ಯೋ ದೇವಾಃ ಸಮುತ್ಥಿತಾಃ ।
ಗೋಭ್ಯೋ ವೇದಾಃ ಸಮುದ್ಗೀರ್ಣಾಃ ಸಷಡಂಗಪದಕ್ರಮಾಃ ॥

ಶೃಂಗಮೂಲೇ ಗವಾಂ ನಿತ್ಯಂ ಬ್ರಹ್ಮವಿಷ್ಣೂ ಸಮಾಶ್ರಿತೌ ।
ಶೃಂಗಾಗ್ರೇ ಸರ್ವತೀರ್ಥಾನಿ ಸ್ಥಾವರಾಣಿ ಚರಾಣಿ ಚ ॥

ಶಿರೋಮಧ್ಯೇ ಮಹಾದೇವಃ ಸರ್ವಭೂತಮಯಃ ಸ್ಥಿತಃ ।
ಲಲಾಟಾಗ್ರೇ ಸ್ಥಿತಾ ದೇವೀ ನಾಸಾವಂಶೇಽಥ ಷಣ್ಮುಖಃ ॥

[೩]ಕರ್ಣಯೋರಶ್ವಿನೌ ದೇವೌ ಚಕ್ಷುಷೋಃ ಶಶಿಭಾಸ್ಕರೌ ।
ದಂತೇಷು ವಾಯವಃ ಸರ್ವೇ ಜಿಹ್ವಾಯಾಂ ವರುಣಃ ಸ್ಥಿತಃ ॥

ಸಂಧ್ಯಾದ್ವಯಂ ತಥೋಷ್ಠೌ ಚ ಗ್ರೀವಾಮಿಂದ್ರಃ ಸಮಾಶ್ರಿತಃ ।
ರಕ್ಷಾಂಸಿ ಕಕ್ಷದೇಶೇ ತು ಸಾಧ್ಯಾಶ್ಚೋರಸಿ ಸಂಸ್ಥಿತಾಃ ॥

ಚತುಷ್ಪಾತ್ಸಕಲೋ ಧರ್ಮಃ ಸ್ವಯಂ ಜಂಘಾಸು ಸಂಸ್ಥಿತಃ ।
ಖುರಮಧ್ಯೇ ತು ಗಂಧರ್ವಾಃ ಖುರಾಗ್ರೇಷು ಚ ಪನ್ನಗಾಃ ॥

ಖುರಾಣಾಂ ಪಶ್ಚಿಮಾಗ್ರೇಷು ಗಣಾ ಹ್ಯಪ್ಸರಸಾಂ ಸ್ಥಿತಾಃ ।
ರುದ್ರಾಶ್ಚೈಕಾದಶಾಃ ಪೃಷ್ಠೇ ವಸವಃ ಸರ್ವಸಂಧಿಷು ॥

ಶ್ರೋಣೀತಟಸ್ಥಾಃ ಪಿತರಃ ಸೋಮೋ ಲಾಂಗೂಲಮಾಶ್ರಿತಃ ।
ಆದಿತ್ಯರಶ್ಮಯೋ ವಾಲಾಃ ಪಿಂಡೀಭೂತಾ ವ್ಯವಸ್ಥಿತಾಃ ॥

ಸಾಕ್ಷಾದ್ಗಂಗಾ ಚ ಗೋಮೂತ್ರೇ ಗೋಮಯೇ ಯಮುನಾ ಸ್ಥಿತಾ ।
ಕ್ಷೀರೇ ಸರಸ್ವತೀದೇವೀ ನರ್ಮದಾ ದಧಿ ಸಂಸ್ಥಿತಾ ॥

ಹುತಾಶನಃ ಸ್ವಯಂ ಸರ್ಪಿರ್ಬ್ರಾಹ್ಮಣಾನಾಂ ಗುರುಃ ಪರಃ ।
ತ್ರಯಸ್ತ್ರಿಂಶಚ್ಚ ದೇವಾನಾಂ ಕೋಟ್ಯೋ ರೋಮಸು ಸಂಸ್ಥಿತಾಃ ॥

ಉದರೇ ಪೃಥಿವೀ ಜ್ಞೇಯಾ ಸಶೈಲವನಕಾನನಾ ।
ಚತ್ವಾರಃ ಸಾಗರಾಃ ಪೂರ್ಣಾ ಗವಾಂ ಯೇ ತು ಪಯೋಧರಾಃ[೪] ॥

---

೩. ಕಂಬಲಾಶ್ವತರೌ ದೇವೌ ನಾಸಾಪುಟ ಸುಪಾಲಕೌ ಇತ್ಯಧಿಕಪಾಠಃ (ಭವಿಷ್ಯೇ)

೪. ಇತಿ ಹೇಮಾದ್ರಿ ವಿರಚಿತೇ ಚತುರ್ವರ್ಗಚಿಂತಾಮಣೌ ದಾನಖಂಡೇ ಗೋದಾನ ಖಂಡೇ ಭವಿಷ್ಯತ್ಪುರಾಣವಚನಮ್ ।

[೫]ತೃಣಾನಿ ಖಾದಂತಿ ವಸಂತ್ಯರಣ್ಯೇ
ಪಿಬಂತಿ ತೋಯಾನ್ಯಪರಿಗ್ರಹಾಣಿ ।
ದುಹ್ಯಂತಿ ವಾಹ್ಯಂತಿ ಪುನಂತಿ ಪಾಪಂ
ಗವಾಂ ರಸೈರ್ಜೀವತಿ ಜೀವಲೋಕಃ ॥

ತುಷ್ಟಾಸ್ತು ಗಾವಃ ಶಮಯಂತಿ ಪಾಪಂ
ದತ್ತಾಸ್ತು ಗಾವಸ್ತ್ರಿದಿವಂ ನಯಂತಿ ।
ಸಂರಕ್ಷಿತಾಶ್ಚೋಪನಯಂತಿ ವಿತ್ತಂ
ಗೋಭಿರ್ನ ತುಲ್ಯಂ ಧನಮಸ್ತಿ ಕಿಂಚಿತ್ ॥

ಇತಿ ಭಾವಯಿತ್ವಾ

ಗೋಃ ಶರೀರೇ ದೇವತಾನ್ಯಾಸಃ ಯಥಾ–

ಶೃಂಗಮೂಲಯೋಃ ಬ್ರಹ್ಮವಿಷ್ಣೂ ನ್ಯಸಾಮಿ[೬] । ತತ್ರೈವ ಶೃಂಗಾಗ್ರಯೋಃ ಸರ್ವತೀರ್ಥಾನಿ ನ್ಯಸಾಮಿ । ಲಲಾಟೇ ಮಹಾದೇವಂ ನ್ಯಸಾಮಿ । ಲಲಾಟಾಗ್ರೇ

---

೫. ತ್ವಂ ಸರ್ವದೇವಗಣಮಂದಿರಮಂಗಭೂತಾ ವಿಶ್ವೇಶ್ವರಿ ತ್ರಿಪಥ ಗೋದಧಿ ಪರ್ವತಾನಾಮ್ । ತ್ವದ್ದಾನಶಸ್ತ್ರಶಕಲೀಕೃತಪಾತಕೌಘಃ ಪ್ರಾಪ್ತೋಽಸ್ಮಿ ನಿರ್ವೃತಿಮತೀವಪರಾಂ ನಮಾಮಿ ॥

ನೈತದ್ವಚನಂ ವಿಪ್ರಂಪ್ರತಿ ದತ್ತಧೇನುಂ ಪ್ರತಿ ದಾತುಃ ಪ್ರಾರ್ಥನಾ ಇತಿ ವಿಜ್ಞಾಯತೇ । ವ್ರತಚೂಡಾಮಣೌ ವೈತರಣೀವ್ರತಪ್ರಸಂಗೇ (೧೭೦ ಪೃಷ್ಠೇ) ಪಠ್ಯಂತೇ ಶ್ಲೋಕಾಃ

ತತೋ ಗೋರಗ್ರಪಾದಾಭ್ಯಾಂ ಗೋರಾಸ್ಯಾಯ ನಮೋಽಸ್ತು ತೇ ।
ಗೋಶೃಂಗಾಭ್ಯಾಂ ಚ ಸಂಪೂಜ್ಯ ಗೋಸ್ಕಂಧಾಭ್ಯಾಂ ತಥೈವ ಚ ॥

ಗೋಪುಚ್ಛಾಯ ನಮಸ್ತೇಽಸ್ತು ಗೋಃ ಪಶ್ಚಾತ್ಪಾದಯೋಸ್ತಥಾ ।
ಗೋಃ ಸರ್ವಾಂಗೇಷು ಸಂಪೂಜ್ಯ ಸ್ಥಾನೇ ಸ್ಥಾನೇಷು ದೇವತಾಃ ।... ಇತ್ಯಾದಿ.

ಹೈಮಶೃಂಗೀಂ ರೌಪ್ಯಖುರೀಂ ಸಘಂಟಾಭರಣಾಂಬರಾಮ್ ।
ತಾಮ್ರಪೃಷ್ಠೀಂ ಕಾಂಸ್ಯದೋಗ್ಧ್ರೀಂ ಸುವರ್ಣೋತ್ತರದಕ್ಷಿಣಾಮ್... ಇತ್ಯಾದಿ.

೬. ಶೃಂಗಮೂಲಯೋಃ = ಕೊಂಬುಗಳ ಮೂಲಭಾಗ(ದಲ್ಲಿ). ಶೃಂಗಾಗ್ರಯೋಃ = ಕೊಂಬುಗಳ ಅಗ್ರಭಾಗ(ಗಳಲ್ಲಿ). ಲಲಾಟೇ = ಹಣೆಯಭಾಗ(ದಲ್ಲಿ). ಶಿರೋಮಧ್ಯೇ= ತಲೆಯ ಮಧ್ಯಭಾಗ(ದಲ್ಲಿ). ಲಲಾಟಾಗ್ರೇ = ಹಣೆಯ ಅಗ್ರಭಾಗ(ದಲ್ಲಿ). ನಾಸಾವಂಶೇ= ಮೂಗಿನ ದಂಡೆ(ಯಲ್ಲಿ). ನಾಸಾಪುಟೇ = ಮೂಗಿನ ಹೊಳ್ಳೆ(ಯಲ್ಲಿ). ಕರ್ಣ(ಯೋಃ)= ಎರಡೂ ಕಿವಿ(ಗಳಲ್ಲಿ). ಚಕ್ಷು(ಷೋಃ) = ಎರಡೂ ಕಣ್ಣು(ಗಳಲ್ಲಿ). ದಂತೇ(ಷು) = ಹಲ್ಲು(ಗಳಲ್ಲಿ). ಜಿಹ್ವಾ(ಯಾಂ) = ನಾಲಗೆ(ಯಲ್ಲಿ). ಹುಂಕಾರೇ = ಹೂಂಕಾರದಲ್ಲಿ.

ಮಹಾದೇವೀಂ ನ್ಯಸಾಮಿ । ನಾಸಾವಂಶೇ ಷಣ್ಮುಖಂ ನ್ಯಸಾಮಿ । ನಾಸಾಪುಟಯೋಃ ಕಂಬಲಾಶ್ವತರೌ ನ್ಯಸಾಮಿ । ಅಧೋಗಾತ್ರೇಷು ದ್ವಾದಶಾದಿತ್ಯಾನ್ ನ್ಯಸಾಮಿ । ಕರ್ಣಯೋರಶ್ವಿನೌ ನ್ಯಸಾಮಿ । ಚಕ್ಷುಷೋಃ ಶಶಿಭಾಸ್ಕರೌ ನ್ಯಸಾಮಿ । ದಂತೇಷು ವಾಯುಂ ನ್ಯಸಾಮಿ । ಜಿಹ್ವಾಯಾಂ ವರುಣಂ ನ್ಯಸಾಮಿ । ಹುಂಕಾರೇ ಸರಸ್ವತೀಂ ನ್ಯಸಾಮಿ । ಗಂಡಯೋರ್ಯಮಧರ್ಮೌ ನ್ಯಸಾಮಿ । ಓಷ್ಠಯೋಃ ಸಂಧ್ಯಾದ್ವಯಂ

---

ಗಂಡಯೋಃ = ಗಂಡಸ್ಥಳ(ಗಳಲ್ಲಿ). ಓಷ್ಠಯೋಃ = ತುಟಿ(ಗಳಲ್ಲಿ). ಗ್ರೀವಾಯಾಂ= ಕುತ್ತಿಗೆ(ಯಲ್ಲಿ). ಕಕ್ಷದೇಶೇ = ಕಂಕುಳ(ನಡುವಿನ ಪಟ್ಟಿ) (ಸ್ಥಳದಲ್ಲಿ). ಉರಸಿ = ವಕ್ಷಸ್ಥಳ(ದಲ್ಲಿ). ಚತುಃಪಾದೇಷು = ನಾಲ್ಕು ಪಾದ(ಗಳಲ್ಲಿ). (ಜಂಘಯೋಃ = ಮೊಣಕಾಲು(ಗಳಲ್ಲಿ) ಎಂದೂ ಪಾಠಾಂತರವಿದೆ). ಖುರಮಧ್ಯೇ = ಗೊರಸುಗಳ ಮಧ್ಯ(ದಲ್ಲಿ). ಖುರಾಗ್ರೇಷು = ಗೊರಸುಗಳ ಅಗ್ರಭಾಗ(ದಲ್ಲಿ). ಖುರಪಾರ್ಶ್ವೇ = ಗೊರಸುಗಳ ಪಾರ್ಶ್ವ(ದಲ್ಲಿ). ಪೃಷ್ಠೇ = ಬೆನ್ನಿನ ಭಾಗ(ದಲ್ಲಿ). ಸರ್ವಸಂಧಿಷು = ಎಲ್ಲಾ ಸಂಧಿ (ಕೀಲು)(ಗಳಲ್ಲಿ). ಶ್ರೋಣೀತಟೇ = ಕಟೀಪ್ರದೇಶ(ದಲ್ಲಿ). ಲಾಂಗೂಲೇ= ಬಾಲ(ದಲ್ಲಿ). ಅಧೋಗಾತ್ರೇಷು = ದೇಹದ ಕೆಳಭಾಗ(ದಲ್ಲಿ). ವಾಲೇಷು = ಕೇಶ (ರೋಮ)ಗಳಲ್ಲಿ (ಬಾಲದ ರೋಮಗಳಲ್ಲಿ). ಗೋಮೂತ್ರೇ = ಗೋಮೂತ್ರ(ದಲ್ಲಿ). ಗೋಮಯೇ = ಗೋಮಯ(ದಲ್ಲಿ) (ಸೆಗಣಿ). ಕ್ಷೀರೇ = ಹಾಲಿ(ನಲ್ಲಿ). ದಧ್ನಿ = ಮೊಸರಿ(ನಲ್ಲಿ). ಸರ್ಪಿಷಿ = ತುಪ್ಪ(ದಲ್ಲಿ). ರೋಮಸು = ರೋಮ(ಗಳಲ್ಲಿ). ಉದರೇ = ಉದರ(ದಲ್ಲಿ) (ಹೊಟ್ಟೆ). ಪಯೋಧರೇಷು = ಕೆಚ್ಚಲು(ಗಳಲ್ಲಿ). ಸರ್ವಶರೀರೇ = ಎಲ್ಲ ಶರೀರ (ಅವಯವ)(ಗಳಲ್ಲಿ). ಪುನಃ ಇವೆಲ್ಲ ಸ್ಥಾನಗಳಲ್ಲೂ 'ನ್ಯಸಾಮಿ' ಎಂಬಲ್ಲಿ 'ಪೂಜಯಾಮಿ' ಸೇರಿಸಿ ಪೂಜಿಸುವುದು.

ಶೃಂಗಮೂಲೇ ಗವಾಂ ನಿತ್ಯಂ ಬ್ರಹ್ಮವಿಷ್ಣೂ ಸಮಾಶ್ರಿತೌ ।
ಶೃಂಗಾಗ್ರೇ ಸರ್ವ ತೀರ್ಥಾನಿ ಸ್ಥಾವರಾಣಿ ಚರಾಣಿ ಚ ॥
ಶಿರೋ ಮಧ್ಯೇ ಮಹಾದೇವಃ ಸರ್ವದೇವಮಯಃ ಸ್ಥಿತಃ ।
ಲಲಾಟಾಗ್ರೇ ಸ್ಥಿತಾ ದೇವೀ ನಾಸಾ ವಂಶೇऽಥಷಣ್ಮುಖಃ ॥
ಕರ್ಣಯೋರಶ್ವಿನೌ ದೇವೌ ಚಕ್ಷುಷೋಃ ಶಶಿ ಭಾಸ್ಕರೌ ।
ದಂತೇಷು ವಾಯವಃ ಸರ್ವೇ ಜಿಹ್ವಾಯಾಂ ವರುಣಃ ಸ್ಥಿತಃ ॥
ಸಂಧ್ಯಾದ್ವಯಂ ತಥೋಷ್ಠಯೋಃ ಗ್ರೀವಾವಿಂದ್ರಃ ಸಮಾಶ್ರಿತಃ ।
ರಕ್ಷಾಂಸಿ ಕಕ್ಷದೇಶೇಷು ಸಾಧ್ಯಾಶ್ಚೋರಸಿ ಸಂಸ್ಥಿತಾಃ ॥
ಚತುಷ್ಪಾತ್ಸಕಲೋ ಧರ್ಮಃ ಸ್ವಯಂ ಜಂಘಾಸು ಸಂಸ್ಥಿತಃ ।
ಖುರಮಧ್ಯೇ ತು ಗಂಧರ್ವಾಃ ಖುರಾಗ್ರೇಷು ಚ ಪನ್ನಗಾಃ ॥
ಖುರಾಣಾಂ ಪಶ್ಚಿಮಾಗ್ರೇಷು ಗಣಾಹ್ಯಪ್ಸರಸಾಂ ಸ್ಥಿತಾಃ ।
ರುದ್ರಾಶ್ಚೈಕಾದಶಾಃ ಪೃಷ್ಠೇ ವಸವಃ ಸರ್ವಸಂಧಿಷು ॥
ಶ್ರೋಣೀತಟಸ್ಥಾಃ ಪಿತರಃ ಸೋಮೋ ಲಾಂಗೂಲಮಾಶ್ರಿತಃ ।
ಆದಿತ್ಯರಶ್ಮಯೋ ವಾಲಾಃ ಪಿಂಡೀಭೂತಾ ವ್ಯವಸ್ಥಿತಾಃ ।

